# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೨೭, ೨೦೧೨ (ಆಶ್ವಯುಜ ೫, ಶಕ ವರ್ಷ ೧೯೩೪) | ಸಂಚಿಕೆ ೩೯ |
|---|---|---|


## ಭಾಗ–೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ**

**ಬಸವ ಭವನ, ಹೈ ಗ್ರೌಂಡ್ಸ್, ಬೆಂಗಳೂರು 560 001**

**ಪ್ರಕಟಣೆ**

**ಸಂಖ್ಯೆ:ಕರಾಆ:ಆಡಳಿತ:03:2012, ದಿನಾಂಕ: 04–09–2012**

**ವಿಷಯ:–** ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10(1ಬಿ) ರಡಿಯಲ್ಲಿ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಸದಸ್ಯರ/ಮಹಿಳಾ ಸದಸ್ಯರ ಆಯ್ಕೆ ಬಗ್ಗೆ

ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 9(ಎ)ರನ್ವಯ ರಚಿತವಾಗಿರುವ ಈ ಕೆಳಕಂಡ ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಗಳಲ್ಲಿ ಖಾಲಿ ಇರುವ ಸದಸ್ಯರ/ಮಹಿಳಾ ಸದಸ್ಯರ ಸ್ಥಾನಕ್ಕೆ ಸೂಕ್ತರಾದವರನ್ನು ಆಯ್ಕೆ ಮಾಡುವ ಸಲುವಾಗಿ ನಿಗಧಿತ ಅರ್ಜಿ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

| ಕ್ರಮ ಸಂಖ್ಯೆ | ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಹೆಸರು | ಹುದ್ದೆಯ ಹೆಸರು |
|---|---|---|
| 01 | ಬೆಂಗಳೂರು ನಗರ 2ನೇ ಹೆಚ್ಚುವರಿ ಜಿಲ್ಲಾ ವೇದಿಕೆ | ಮಹಿಳಾ ಸದಸ್ಯರು |
| 02 | ಧಾರವಾಡ | ಸದಸ್ಯರು |
| 03 | ಉಡುಪಿ | ಮಹಿಳಾ ಸದಸ್ಯರು |

ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 10(1ಬಿ)

(i) ರನ್ವಯ ಅರ್ಜಿ ಸಲ್ಲಿಸಲು ಅಭ್ಯರ್ಥಿಗೆ ಕನಿಷ್ಠ 35 ವರ್ಷ ವಯಸ್ಸಾಗಿರತಕ್ಕದ್ದು.

(ii) ರನ್ವಯ ಅಭ್ಯರ್ಥಿಯು ಯಾವುದಾದರೂ ಅಂಗೀಕೃತ ವಿಶ್ವವಿದ್ಯಾಲಯದ ಪದವೀಧರರಾಗಿರಬೇಕು.

(iii) ರನ್ವಯ ಅಭ್ಯರ್ಥಿಯು ನ್ಯಾಯ, ನಿಷ್ಠೆ ಮತ್ತು ಪ್ರಾಮಾಣಿಕತೆಯನ್ನು ಹೊಂದಿರುವುದರ ಜೊತೆಗೆ ಕಾನೂನು, ಹಣಕಾಸು, ವಾಣಿಜ್ಯ, ಲೆಕ್ಕ, ಕೈಗಾರಿಕೆ, ಸಾರ್ವಜನಿಕ ವ್ಯವಹಾರಗಳು ಮತ್ತು ಸಾರ್ವಜನಿಕ ಆಡಳಿತ ಈ ಕ್ಷೇತ್ರಗಳಲ್ಲಿ ಕನಿಷ್ಠ ಹತ್ತು ವರ್ಷಗಳ ಅನುಭವ ಹೊಂದಿರಬೇಕು.

ಮೇಲಿನ ಅರ್ಹತೆಯನ್ನು ಹೊಂದಿರುವಂತಹ ಅಭ್ಯರ್ಥಿಗಳು ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಸದಸ್ಯರು ಮತ್ತು ಮಹಿಳಾ ಸದಸ್ಯರಾಗಲು ಅರ್ಹರಿರುತ್ತಾರೆ. ಅಭ್ಯರ್ಥಿಗಳು **ಆಯ್ಕೆ ಬಯಸಿರುವ ಹುದ್ದೆಯ ಹೆಸರನ್ನು ಅರ್ಜಿ ನಮೂನೆಯಲ್ಲಿ ಸ್ಪಷ್ಟವಾಗಿ ನಮೂದಿಸಿ** ಪೂರ್ಣವಾಗಿ ಭರ್ತಿ ಮಾಡಿದ ಅರ್ಜಿ ನಮೂನೆಯನ್ನು ಹಾಗೂ ಅಗತ್ಯ ದಾಖಲೆಗಳ ದೃಢೀಕೃತ ಪ್ರತಿಗಳನ್ನು ಲಕೋಟೆಯಲ್ಲಿರಿಸಿ, ಲಕೋಟೆಯ ಮೇಲ್ಭಾಗದಲ್ಲಿ (ಆಯ್ಕೆ ಬಯಸಿರುವ ಜಿಲ್ಲೆಯನ್ನು ನಮೂದಿಸಿ)**"__________**ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯ ಸದಸ್ಯರ/ಮಹಿಳಾಸದಸ್ಯರ ಹುದ್ದೆಗೆ ಅರ್ಜಿ**"** ಎಂದು ದಪ್ಪ ಅಕ್ಷರಗಳಲ್ಲಿ ಬರೆದು, **ದಿನಾಂಕ 06–10–2012ರಂದು ಶನಿವಾರ ಸಂಜೆ 5–00 ಘಂಟೆಯೊಳಗಾಗಿ** ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈಗ್ರೌಂಡ್ಸ್, ಬೆಂಗಳೂರು 560 001 ಇಲ್ಲಿಗೆ ಸಲ್ಲಿಸುವುದು.

**ನಿಗಧಿತ ದಿನಾಂಕ ಹಾಗೂ ಸಮಯದ ನಂತರ ಅಂಚೆ ಮೂಲಕ ಅಥವಾ ನೇರವಾಗಿ ಬರುವಂತಹ ಯಾವುದೇ ಅರ್ಜಿಗಳನ್ನು ಸ್ವೀಕರಿಸುವುದಿಲ್ಲ.** ನಿಗಧಿತ ಅರ್ಜಿ ನಮೂನೆಯು ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ವೆಬ್‌ಸೈಟ್ **http://kscdrc.kar.nic.in** ನಲ್ಲಿ ಲಭ್ಯವಿದ್ದು, ಸಂಬಂಧಪಟ್ಟ ಅರ್ಹ ಅಭ್ಯರ್ಥಿಗಳು ವೆಬ್‌ಸೈಟ್‌ನಿಂದ ಅರ್ಜಿ ನಮೂನೆಯನ್ನು ನೇರವಾಗಿ ಪಡೆದುಕೊಳ್ಳಬಹುದಾಗಿದೆ ಅಥವಾ ರಾಜ್ಯ ಆಯೋಗ/ಜಿಲ್ಲಾ ಗ್ರಾಹಕರ ವ್ಯಾಜ್ಯಗಳ ಪರಿಹಾರ ವೇದಿಕೆಯಲ್ಲಿ ಒಂದು ಅರ್ಜಿಗೆ ರೂ.10–00 ರಂತೆ ಶುಲ್ಕವನ್ನು ಪಾವತಿ ಮಾಡಿ ಅರ್ಜಿ ನಮೂನೆಯನ್ನು ಪಡೆದುಕೊಳ್ಳಬಹುದಾಗಿರುತ್ತದೆ.

**ನ್ಯಾಯಮೂರ್ತಿ ಕೆ. ರಾಮಣ್ಣ,**
ಅಧ್ಯಕ್ಷರು
ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ,
ಬೆಂಗಳೂರು

**ಪಿ.ಆರ್. 1259**

## PROCEEDINGS OF THE ASST. COMMISSIONER OF COMMERCIAL TAXES LVO-065ADDL, BANGALORE.

**DATE: 16-08-2012**

**Present** : DODDALINGAPPA, Asst. Commissioner of Commercial Taxes, LVO-065 Addl, Bangalore.

**Name of the dealer** : M/S. Pan Parag India Limited, No.6, Nisargha Farm House, Mathahalli Road, Makali, Dasanapura Hobli, Bangalore North-562123.

**TIN** : **29940824286**

### NOTIFICATION UNDER RULE 6(a)(i)OF THE CST(KARNATAKA) RULES, 1957

### READ WITH RULE 12 (2) OF THE CST (R & T) RULES,1957

M/S. PAN PARAG INDIA LIMITED, has been a registered dealer under CST Act, 1956 on the files of this office. The said dealer was issued with the following Forms in respect of which a report of the Forms lost is received from him as per Rule 6(e)(i) of the CST (KARNATAKA) Rule 1957.

| Form No. | Date of issue to the dealer | To whom issued by the dealer | Goods purchased | Amount | Date of issue by the dealer | Whether lost in the custody of seller/purchaser |
|---|---|---|---|---|---|---|
| KA-CA 178562 | 29-06-09 | M/S. Yogesh Traders, Kanpur | KATTHA | RS.15,45,300/- | 30-09-09 | Custody of seller |

As per the provision of Rule 6 (d) of the CST (KARNATAKA) Rules, 1957 every declaration form obtained from the Assessing Authority by a registered dealer shall be kept by him in safe custody and he shall be personally responsible for the lost, destruction or theft of any such form or the loss of Government revenue if any result in directly or indirectly from such theft or loss.

The dealer has submitted a report to this office that the above form or forms issued by him to the selling dealer have lost in transit at the hands of the seller. He therefore has submitted an indemnity bond as prescribed in Form-G to this office and requested to permit him issue another Form. Further, he has also filed a letter stating that the selling dealer has also furnished indemnity bond to the notified authority of his state where the said form was lost in his custody. Further, the dealer to whom the forms were issued has made appropriate entries in remarks columns of the C-Form usage register maintained by him.

The dealer has also reported that he has issued a notification in the local newspaper of the loss of such form and also filed complaint before the Jurisdictional Police. The selling dealer has also reported the loss in the newspaper of his area. In view of the above the dealer is permitted to issue new form in lieu of the lost form to his seller.

**The following forms in respect of which a report is received as above under Sub Rule(e) of Rule 6 of the CST (KARNATAKA) Rules, 1957 are herewith NOTIFIED AS NOT VALID FOR THE PURPOSE OF SUB RULE a(i), aa(i) or (aa) (ii) or (aaa) of the said Rule 6 in exercise of power under rule 6(h) of the validity of the following forms shall be invalid ab-initio.**

| Form No. | Date of issue to the dealer | To whom issued by the dealer | Goods purchased | Amount | Date of issue by the dealer | Whether lost in the custody of seller/purchaser |
|---|---|---|---|---|---|---|
| KA-CA 178562 | 29-06-09 | M/S. Yogesh Traders, Kanpur | KATTHA | RS.15,45,300/- | 30-09-09 | Custody of seller |

The above notification is herewith declared to publish in the official gazette as required under Rule 6(a) (i) of the CST (Karnataka) Rules, 1957.

Signed this day 1**6th** of **August** month of **2012** year

**Asst. Commissioner of Commercial Taxes,**

**P R 1257** **LVO-065 Addl, Bangalore.**

## PROCEEDINGS OF THE ASST. COMMISSIONER OF COMMERCIAL TAXES LVO-065ADDL, BANGALORE.

**DATE: 16-08-2012**

**Present** : DODDALINGAPPA, Asst. Commissioner of Commercial Taxes, LVO-065 Addl, Bangalore.

**Name of the dealer** : M/S. Jalaram Industries, No.6, Nisargha Farm House, Mathahalli Road, Makali, Dasanapura Hobli, Bangalore North-562123.

**TIN** : **29470310105**

### NOTIFICATION UNDER RULE 6(a)(i)OF THE CST(KARNATAKA) RULES, 1957 READ WITH RULE 12 (2) OF THE CST (R & T) RULES,1957

M/S. Jalaram Industries, has been a registered dealer under CST Act, 1956 on the files of this office. The said dealer was issued with the following Forms in respect of which a report of the Forms lost is received from him as per Rule 6(e)(i) of the CST (KARNATAKA) Rule 1957.

| Form No. | Date of issue to the dealer | To whom issued by the dealer | Goods purchased | Amount | Date of issue by the dealer | Whether lost in the custody of seller/purchaser |
|---|---|---|---|---|---|---|
| 0197334 | 01-12-2008 | M/S. Yogesh Traders, Kanpur | KATTHA | RS.5,40,600/- | 14-02-09 | Custody of seller |

As per the provision of Rule 6 (d) of the CST (KARNATAKA) Rules, 1957 every declaration form obtained from the Assessing Authority by a registered dealer shall be kept by him in safe custody and he shall be personally responsible for the lost, destruction or theft of any such form or the loss of Government revenue if any result in directly or indirectly from such theft or loss.

The dealer has submitted a report to this office that the above form or forms issued by him to the selling dealer have lost in transit at the hands of the seller. He therefore has submitted an indemnity bond as prescribed in Form-G to this office and

requested to permit him issue another Form. Further, he has also filed a letter stating that the selling dealer has also furnished indemnity bond to the notified authority of his state where the said form was lost in his custody. Further, the dealer to whom the forms were issued has made appropriate entries in remarks columns of the C-Form usage register maintained by him.

The dealer has also reported that he has issued a notification in the local newspaper of the loss of such form and also filed complaint before the Jurisdictional Police. The selling dealer has also reported the loss in the newspaper of his area. In view of the above the dealer is permitted to issue new form in lieu of the lost form to his seller.

**The following forms in respect of which a report is received as above under Sub Rule(e) of Rule 6 of the CST (KARNATAKA) Rules, 1957 are herewith NOTIFIED AS NOT VALID FOR THE PURPOSE OF SUB RULE a(i), aa(i) or (aa) (ii) or (aaa) of the said Rule 6 in exercise of power under rule 6(h) of the validity of the following forms shall be invalid ab-initio.**

| Form No. | Date of issue to the dealer | To whom issued by the dealer | Goods purchased | Amount | Date of issue by the dealer | Whether lost in the custody of seller/purchaser |
|---|---|---|---|---|---|---|
| 0197334 | 14-02-09 | M/S. Yogesh Traders, Kanpur | KATTHA | RS.5,40,600/- | 14-02-09 | Custody of seller |

The above notification is herewith declared to publish in the official gazette as required under Rule 6(a) (i) of the CST (Karnataka) Rules, 1957.

Signed this day 1**6th** of **August** month of **2012** year

**Asst. Commissioner of Commercial Taxes,**
**LVO-065 Addl, Bangalore.**

**P R 1258**

## ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯ, ತುಮಕೂರು ವಿಭಾಗ, ತುಮಕೂರು.

**ನಂ.ಎ8:71 (ಎ) ಕ್ರೈಂ.ನಂ. 57/05-06, ದಿನಾಂಕ: 26-10-2009**

**ಉಪಸ್ಥಿತರು** : ಶ್ರೀ. ಉಪೇಂದ್ರ ಪ್ರತಾಪ್ ಸಿಂಗ್, ಭಾ.ಅ.ಸೇ., ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ತುಮಕೂರು ವಿಭಾಗ, ತುಮಕೂರು.

**ಫಿರ್ಯಾದುದಾರರು** : ವಲಯ ಅರಣ್ಯಾಧಿಕಾರಿ, ಕುಣಿಗಲ್ ವಲಯ, ಹುಲಿಯೂರುದುರ್ಗ.

**ಆರೋಪಿ** : ಶ್ರೀ ತಮ್ಮಣ್ಣಗೌಡ, ಎಳೀಗೆಹಳ್ಳಿ ಗ್ರಾಮ, ಮಾಡಬಾಳು ಹೋಬಳಿ, ಮಾಗಡಿ ತಾ॥ ಬೆಂಗಳೂರು ಗ್ರಾಮಾಂತರ ಜಿಲ್ಲೆ.

**ಅರ್ಜಿದಾರರು** : ಶ್ರೀಮತಿ ಬಿ.ಎನ್.ವಸಂತ ಕೋಂ ಶ್ರೀ ತಮ್ಮಣ್ಣಗೌಡ, (ಜಿಪಿಎ ಹೋಲ್ಡರ್ ಅಫ್ ಶ್ರೀ ತಮ್ಮಣ್ಣ ಗೌಡ)

**ಅಂತಿಮ ಅದೇಶ**

**ಪ್ರಸ್ತಾವನೆ:-**

ಕುಣಿಗಲ್ ತಾಲ್ಲೋಕಿನ ಹುತ್ರೀದುರ್ಗ ಅರಣ್ಯ ಪ್ರದೇಶದಿಂದ ನೀಲಗಿರಿ ಹಾಗೂ ಶ್ರೀಗಂಧದ ಮರದ ತುಂಡುಗಳನ್ನು ಅಕ್ರಮವಾಗಿ ಕಡಿದು ಟ್ರ್ಯಾಕ್ಟರ್ ಸಂಖ್ಯೆ: KA-02/T-1738 ಹಾಗೂ ಅದರ ನಂಬರಿಲ್ಲದ ಟ್ರೈಲರ್ ನಲ್ಲಿ ಸಾಗಿಸುತ್ತಿದ್ದಾಗ ಐಪಿಸಿ ಕಲಂ 302, 307, 379 ರೆ/ವಿ 149, ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 24 (ಡಿ) 71 (ಎ) 86, 87 ಮತ್ತು ಇಂಡಿಯನ್ ಆರ್ಮ್ಸ್ ಅಕ್ಟ್ 1959ರ 3,4 ಮತ್ತು 25(4), 1 (ಬಿ) (ಎ)ರ ಮೇರೆಗೆ ಟ್ರ್ಯಾಕ್ಟರ್ ಹಾಗೂ ಟ್ರೈಲರ್ ನ್ನು ಪೋಲೀಸ್ ಸರ್ಕಲ್ ಇನ್‌ಸ್ಪೆಕ್ಟರ್, ಕುಣಿಗಲ್ ಸರ್ಕಲ್, ಕುಣಿಗಲ್ ರವರಿಂದ ದಿನಾಂಕ: 15-03-2006 ರಂದು ಕ್ರೈಂ ಸಂಖ್ಯೆ: 57/2006ರ ಮುಖಾಂತರ ಮಾಲು ಸಮೇತ ಅಮಾನತ್ತು ಪಡಿಸಲಾಗಿದೆ.

ಸದರಿ ಟ್ರ್ಯಾಕ್ಟರ್ ಹಾಗೂ ಟ್ರೈಲರನ್ನು ಮಾಲು ಸಮೇತವಾಗಿ ಮಾನ್ಯ ಪ್ರಿನ್ಸಿಪಲ್ ಡಿಸ್ಟ್ರಿಕ್ಟ್ ಅಂಡ್ ಸೆಷನ್ಸ್ ಜಡ್ಜ್ ನ್ಯಾಯಾಲಯ, ತುಮಕೂರು ರವರ ಅದೇಶ ಸಂಖ್ಯೆ: ಎಸ್.ಸಿ.ನಂ. 88/2006 ರನ್ವಯ ದಿನಾಂಕ: 19-12-2006 ರಂದು ಅರಣ್ಯ ಇಲಾಖೆಗೆ ಹಸ್ತಾಂತರಿಸಲಾಗಿರುತ್ತದೆ. ಹಸ್ತಾಂತರಿಸುವ ಪೂರ್ವದಲ್ಲಿ ನ್ಯಾಯಾಲಯದಲ್ಲಿ ಸಾಕ್ಷಿಗಾಗಿ ಹಾಜರು ಪಡಿಸಲು ಅವಶ್ಯಕವಾದಷ್ಟು ಶ್ರೀಗಂಧ ಹಾಗೂ ನೀಲಗಿರಿ ತುಂಡುಗಳನ್ನು ಆರಕ್ಷಕ ಇಲಾಖೆಯಲ್ಲಿಯೇ ಉಳಿಸಿಕೊಳ್ಳಲಾಗಿರುತ್ತದೆ.

ಅರಕ್ಷಕ ಇಲಾಖೆಯಿಂದ ಹಸ್ತಾಂತರಿಸಲಾದ ಪ್ರಶ್ನಿತ ಕ್ರೈ ನಂ 57/2006ರ ಪ್ರಕರಣವನ್ನು ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ತುಮಕೂರು ವಿಭಾಗ, ತುಮಕೂರು ರವರ ನ್ಯಾಯಾಲಯದಲ್ಲಿ ಕರ್ನಾಟಕ ಅರಣ್ಯ ಕಾಯಿದೆ 1963ರ ಪ್ರಕಾರ ನಿಯಮ 71 (ಎ) ಪ್ರಕರಣವೆಂದು ಪರಿಗಣಿಸಿ ವಿಚಾರಣೆ ನಡೆಸುವ ಪೂರ್ವದಲ್ಲಿ, ಅಪಾಧಿತರಾದ ಶ್ರೀ ತಮ್ಮಣ್ಣಗೌಡ ಇವರ ಪತ್ನಿ ಶ್ರೀಮತಿ ಬಿ.ಎನ್. ವಸಂತ ಇವರು ಅರಣ್ಯ ಇಲಾಖೆಗೆ ದಿನಾಂಕ: 16–09–2006 ರಂದು ವಕೀಲರ ಮುಖಾಂತರ ಅರ್ಜಿ ಸಲ್ಲಿಸಿ, ಅವರು ಆಪಾದಿತರ ಜಿಪಿಎ ಹೋಲ್ಡರ್ ಎಂಬುದಾಗಿ ಸ್ಪಷ್ಟಪಡಿಸಿರುತ್ತಾರೆ.

ಆದ ಕಾರಣ ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ತುಮಕೂರು ವಿಭಾಗ, ತುಮಕೂರು ರವರ ನ್ಯಾಯಾಲಯದಲ್ಲಿ ಕರ್ನಾಟಕ ಅರಣ್ಯ ಕಾಯಿದೆ 1963ರ ನಿಯಮ 71 (ಎ) ಪ್ರಕಾರ ಪ್ರಕರಣದ ವಿಚಾರಣೆಯನ್ನು ನಡೆಸುವಾಗ ಪ್ರತಿಯೊಂದು ವಿಚಾರಣೆ ದಿನಾಂಕದಲ್ಲಿ ಜಿಪಿಎ ಹೋಲ್ಡರ್ ಶ್ರೀಮತಿ ಬಿ.ಎನ್. ವಸಂತ, ಕೋಂ ಶ್ರೀ ತಮ್ಮಣ್ಣಗೌಡ ಇವರಿಗೆ ನೋಟೀಸನ್ನು ಜಾರಿಗೊಳಿಸಲಾಗಿರುತ್ತದೆ.

ಈ ಪ್ರಕರಣದಲ್ಲಿ ಅಪಾದಿತರಾದ ಶ್ರೀ ತಿಮ್ಮಣ್ಣಗೌಡ ಇವರು ಅರಣ್ಯ ಪ್ರದೇಶದಿಂದ ಅಕ್ರಮವಾಗಿ ಅರಣ್ಯೋತ್ಪನ್ನವನ್ನು ಪ್ರಶ್ನಿತ ಟ್ರ್ಯಾಕ್ಟರನಲ್ಲಿ ಸಾಗಾಣಿಕೆ ಮಾಡುತ್ತಿದ್ದುದೇ ಅಲ್ಲದೇ, ಅದನ್ನು ತಡೆಯಲು ಬಂದ ಅರಣ್ಯ ಸಿಬ್ಬಂದಿಯಾದ ಅರಣ್ಯ ರಕ್ಷಕ ಶ್ರೀ ರಾಜಶೇಖರ್ ಇವರ ಮೇಲೆ ಟ್ರಾಕ್ಟರನ್ನು ಹರಿಸಿ ಅವರ ಸಾವಿಗೆ ಕಾರಣರಾದ ಹಿನ್ನೆಲೆಯಲ್ಲಿ, ಈ ಪ್ರಕರಣವು ತುಮಕೂರಿನ ಒಂದನೇ ಅಪರ ಸತ್ರ (ಶೀಘ್ರಪಥ) ನ್ಯಾಯಾಲಯದಲ್ಲಿ ಕ್ರಿಮಿನಲ್ ಅಪೀಲು ಸಂಖ್ಯೆ:64/2007 ರಂತೆ ನಡೆಯುತ್ತಿರುತ್ತದೆ. ಈ ಪ್ರಕರಣದ ವಿಚಾರಣೆಯು ನಡೆದು ಮಾನ್ಯ ನ್ಯಾಯಾಲಯವು ದಿನಾಂಕ: 20–11–2007ರಂದು ಹೊರಡಿಸಲಾದ ತೀರ್ಪಿನಲ್ಲಿ "ಸತ್ರ ನ್ಯಾಯಾಲಯದಲ್ಲಿ ಪ್ರಕರಣ ತೀರ್ಮಾನಗೊಂಡು ಆರೋಪಿತರು ದೋಷಮುಕ್ತಗೊಂಡಿರುವುದರಿಂದ ವಾಹನವನ್ನು ಯಾರಿಂದ ವಶಪಡಿಸಿಕೊಳ್ಳಲಾಗಿತ್ತೋ ಅವರಿಗೆ ಅಥವಾ ಅದರ ಮಾಲೀಕರಿಗೆ ಹಿಂದಿರುಗಿಸಬೇಕಾಗಿರುತ್ತದೆ. ಎಂಬುದಾಗಿ ಅಭಿಪ್ರಾಯಪಟ್ಟು ಬದಲಾದ ಸನ್ನಿವೇಶಗಳಿಂದಾಗಿ ಸದರಿ ವಾಹನವನ್ನು ಅರ್ಜಿದಾರರಿಗೆ ಕೊಡಿಸುವುದು ಸೂಕ್ತವೆನಿಸುತ್ತದೆಂದು, ಅರ್ಜಿದಾರರ ಅಪೀಲನ್ನು ಅಂಗೀಕರಿಸಿ, ಅಪೀಲು ಅವಧಿ ಮುಗಿದಿಲ್ಲವಾದ್ದರಿಂದ ಟ್ರ್ಯಾಕ್ಟರ್ ಮೌಲ್ಯಕ್ಕೆ ಸರಿಸಮನಾಗಿ ನಷ್ಟ ಭರ್ತಿ ಪತ್ರ ಬರೆಸಿಕೊಂಡು ಟ್ರ್ಯಾಕ್ಟರ್‌ನ್ನು ಅಪೀಲುದಾರರಿಗೆ ಹಿಂದಿರುಗಿಸತಕ್ಕದೆಂದು ಆದೇಶ ನೀಡಿರುತ್ತದೆ. ಹಾಗೆಯೇ ಅಪರಾದಕ್ಕೆ ಒಳಪಟ್ಟ ಟ್ರ್ಯಾಕ್ಟರ್‌ನೊಂದಿಗಿನ ಟ್ರೈಲರನ್ನು ಉಳಿದ ಮುದ್ದೆ ಮಾಲುಗಳೊಂದಿಗೆ ಅಧಿಹರಣ ಮಾಡಿ ಆದೇಶ ಹೊರಡಿಸಿರುತ್ತದೆ.

ಮಾನ್ಯ ನ್ಯಾಯಾಲಯವು ದಿನಾಂಕ: 20–11–2007 ರಂದು ಕ್ರಿಮಿನಲ್ ಅಪೀಲು ಸಂಖ್ಯೆ: 64/2007ರ ಸಂಬಂಧ ಹೊರಡಿಸಲಾದ ಆದೇಶವನ್ನು ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿರವರ ನ್ಯಾಯಾಲಯದಲ್ಲಿ ಪಾಲಿಸಲಾಗಿರುತ್ತದೆ. ಈ ಆದೇಶವನ್ನು ಪಾಲಿಸುವ ಪೂರ್ವದಲ್ಲಿ ನ್ಯಾಯಾಲಯದ ಅದೇಶದಂತೆಯೇ ಟ್ರ್ಯಾಕ್ಟರ್‌ನ ಮೌಲ್ಯಕ್ಕೆ ಸರಿಸಮನಾಗಿ ಮೌಲ್ಯ ರೂಪಾಯಿ 4.00 ಲಕ್ಷ ಮೊಬಲಗಿನ ನಷ್ಟಭರ್ತಿ ಪತ್ರವನ್ನು (ಇಂಡೆಮ್ ನಿಟಿ ಬಾಂಡ್) ಜಿ.ಪಿ.ಎ. ಹೋಲ್ಡರ್ ಶ್ರೀಮತಿ ಬಿ.ಎನ್. ವಸಂತ, ಕೋಂ ಶ್ರೀ ತಮ್ಮಣ್ಣಗೌಡ ಇವರಿಂದ ದಿನಾಂಕ: 05–01–2008ರಂದು ಪಡೆದುಕೊಂಡು ಅದರಲ್ಲಿ ಟ್ರ್ಯಾಕ್ಟರ್‌ನ ಆರ್.ಸಿ. ಬುಕ್ ಮಾಲೀಕರು ಹಾಗೂ ಜಿಪಿಎ ಹೋಲ್ಡರ್ ರವರ ಪತಿಯೂ ಆದ ಶ್ರೀ ತಮ್ಮಣ್ಣಗೌಡ ಇವರ ಸಹಿಯನ್ನು ಸಾಕ್ಷಿಯಾಗಿ, ನೊಂದಣಿ ಹಾಗೂ ಮುದ್ರಾಂಕ ಇಲಾಖೆ, ತುಮಕೂರುರವರಿಂದ ವಿತರಿಸಲಾದ ಪತ್ರದಲ್ಲಿ ಪಡೆದುಕೊಳ್ಳಲಾಗಿದ್ದು, ಅದಕ್ಕೆ ಅವರ ಪರ ವಕೀಲರಾದ ಶ್ರೀ ಜಿ. ರಘುಪ್ರಸಾದ್‌ರವರಿಂದ ಐಡೆಂಟಿಫಿಕೇಶನ್ ಮೂಲಕ ಸಹಿ ಪಡೆದುಕೊಳ್ಳಲಾಗಿರುತ್ತದೆ.

ರೂಪಾಯಿ 4.00 ಲಕ್ಷ ಮೊಬಲಗಿನ ಇಂಡೆಮ್‌ನಿಟಿ ಬಾಂಡ್ ಮೂಲಕ ಟ್ರ್ಯಾಕ್ಟರ್ ಸಂಖ್ಯೆ: KA-02/T–1738 ಅನ್ನು ಮಂಧ್ಯಂತರ ವಶಕ್ಕೆ ದಿನಾಂಕ: 05–01–2008ರಂದು ಬಿಡುಗಡೆಗೊಳಿಸುವ ಪೂರ್ವದಲ್ಲಿ ವಿಧಿಸಲಾದ ಷರತ್ತು ನಂಬ್ರ 1, 2 ಹಾಗೂ 3 (ಎ) (ಬಿ) (ಸಿ) (ಡಿ) ಅನ್ನು ಜಿಪಿಎ ಹೋಲ್ಡರ್ ಶ್ರೀಮತಿ ಬಿ.ಎನ್. ವಸಂತ ಇವರು ಉಲ್ಲಂಘಿಸಿರುವುದು, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ತುಮಕೂರು ವಿಭಾಗ, ತುಮಕೂರುರವರ ನ್ಯಾಯಾಲಯದಲ್ಲಿ ನಡೆಯುತ್ತಿರುವ ಪ್ರಕರಣದ ವಿಚಾರಣೆಗೆ ಯಾವುದೇ ದಿನಾಂಕದಂದು ಹಾಜರಾಗದೇ ಇರುವುದು ಮತ್ತು ಟ್ರ್ಯಾಕ್ಟರನ್ನು ಹಾಜರು ಪಡಿಸದೆ ಇರುವುದು ಕಡತದಿಂದ ತಿಳಿದು ಬಂದಿರುತ್ತದೆ. ಈ ಕಾರಣದಿಂದಾಗಿ ಷರತ್ತು ನಂಬರ್ 3(ಇ) ಪ್ರಕಾರ ಕ್ರಮ ಜರುಗಿಸುವುದು ಅನಿವಾರ್ಯವಾಗಿರುವುದರಿಂದ ಇಂಡೆಮ್‌ನಿಟಿ ಬಾಂಡ್‌ನ ಮೊಬಲಗು ರೂಪಾಯಿ 4.00 ಲಕ್ಷ ಮೊಬಲಗನ್ನು ಏಕೆ ಸರ್ಕಾರದ ಪರ ಮುಟುಗೋಲು ಹಾಕಿಕೊಳ್ಳಬಾರದು ಎಂಬುದಕ್ಕೆ ನಿಮ್ಮ ಉತ್ತರವನ್ನು 7 ದಿನಗಳಲ್ಲಿ ಸಲ್ಲಿಸಬೇಕೆಂದು, ಜಿ.ಪಿ.ಎ. ಹೋಲ್ಡರ್ ಶ್ರೀಮತಿ ವಸಂತ ಇವರಿಗೆ ನೊಂದಾಯಿತ ಅಂಚೆ ಮೂಲಕ ದಿನಾಂಕ: 10–09–2009ರಂದು ನೋಟೀಸ್ ಜಾರಿಗೊಳಿಸಲಾಗಿ ಸದರಿಯವರು ನೋಟೀಸನ್ನು ದಿನಾಂಕ: 17–09–2009 ರಂದು ಸ್ವೀಕರಿಸಲಾಗಿದ್ದರೂ ಸಹ ಯಾವುದೇ ಉತ್ತರವನ್ನು ನಿಗಧಿತ 7 ದಿನಗಳೊಳಗೆ ಸಲ್ಲಿಸಿರುವುದಿಲ್ಲ ಹಾಗೂ ಪ್ರತಿಕ್ರಿಯಿಸಿರುವುದಿಲ್ಲ.

ಮೇಲ್ಕಂಡ ಎಲ್ಲಾ ಕಾರಣಗಳಿಂದ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ**

ಅರಕ್ಷಕ ಇಲಾಖೆಯಲ್ಲಿ ದಿನಾಂಕ: 15–03–2006 ರಂದು ಕ್ರೈಂ ನಂ. 57/2006 ಅನ್ನು ದಾಖಲಿಸಿ, ದಿನಾಂಕ: 19–12–2006 ರಂದು ಅರಣ್ಯ ಇಲಾಖೆಗೆ ಪ್ರಕರಣವನ್ನು ಹಸ್ತಾಂತರಿಸಲಾಗಿದ್ದ ಹಿನ್ನೆಲೆಯಲ್ಲಿ, ಕರ್ನಾಟಕ ಅರಣ್ಯ ಕಾಯಿದೆ 1963 ರ ನಿಯಮ 71 (ಎ) ಪ್ರಕಾರ ಅರಣ್ಯ ಇಲಾಖೆಯಲ್ಲಿ ಈ ಪ್ರಕರಣದ ವಿಚಾರಣೆಯನ್ನು ನಡೆಸಲಾಗುತ್ತಿತ್ತು. ಈ ಪ್ರಕರಣದಲ್ಲಿ ತುಮಕೂರಿನ ಮಾನ್ಯ ಒಂದನೇ ಅಪರ ಪತ್ರ (ಶೀಘ್ರಪಥ) ನ್ಯಾಯಾಲಯವು ದಿನಾಂಕ ಃ20–11–2007 ರಂದು ಹೊರಡಿಸಲಾದ ಆದೇಶದಂತೆ ಪ್ರಕರಣಕ್ಕೆ ಒಳಪಟ್ಟ ಟ್ರ್ಯಾಕ್ಟರ್ ಸಂಖ್ಯೆಃ KA-02/T–1738ನ್ನು

ಅಪಾದಿತರ ಪತ್ನಿ ಹಾಗೂ ಜಿಪಿಎ ಹೋಲ್ಡರ್ ಶ್ರೀಮತಿ ಬಿ.ಎನ್.ವಸಂತ ಇವರಿಗೆ ದಿನಾಂಕಃ 5–01–2008 ರಂದು ಷರತ್ತುಗಳನ್ನು ವಿಧಿಸಿ ರೂಪಾಯಿ 4.00 ಲಕ್ಷ ಮೊಬಲಗಿನ ಇಂಡೆಮ್‌ನಿಟಿ ಬಾಂಡ್ ಮೂಲಕ ಮಧ್ಯಂತರ ವಶಕ್ಕೆ ನೀಡಲಾಗಿತ್ತು. ಜಿಪಿಯ ಹೋಲ್ಡರ್ ಶ್ರೀಮತಿ ಬಿ.ಎನ್.ವಸಂತ ಇವರು ದಿನಾಂಕಃ 5–1–2008ರಂದು ಬರೆದುಕೊಟ್ಟ ಇಂಡೆಮ್‌ನಿಟಿ ಬಾಂಡ್ (ನಷ್ಟಭರ್ತಿ ಪ್ರಮಾಣ ಪತ್ರ)ನ ಷರತ್ತು ನಂಬ್ರ 3(ಸಿ), ಪ್ರಕಾರ ವಿಚಾರಣೆಗೆ ಹಾಜರಾಗುವುದಾಗಲೀ ಅಥವಾ ಟ್ರ್ಯಾಕ್ಟರ್‌ನ್ನು ಹಾಜರುಪಡಿಸುವುದಾಗಲೀ ಮಾಡದೇ ಷರತ್ತನ್ನು ಉಲ್ಲಂಘಿಸಿದುದರಿಂದ ಷರತ್ತು ನಂಬ್ರ 3(ಇ) ಪ್ರಕಾರ ಇಂಡೆಮ್‌ನಿಟಿ ಬಾಂಡ್ ಮೊತ್ತ ರೂಪಾಯಿ 4.00 (ನಾಲ್ಕು ಲಕ್ಷ) ಮೊಬಲಗನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲಾಗಿದೆ. ಸದರಿ 4.00 ಲಕ್ಷ ಮೊಬಲಗನ್ನು ಶ್ರೀಮತಿ ಬಿ.ಎನ್.ವಸಂತ ಕೋಂ ಶ್ರೀ. ತಮ್ಮಣ್ಣಗೌಡ ಇವರಿಂದ ಕಂದಾಯ ಬಾಕಿಯಾಗಿ ವಸೂಲು ಮಾಡಲು ಸಂಬಂಧಪಟ್ಟ ವ್ಯಾಪ್ತಿಯ ಕಂದಾಯ ಇಲಾಖೆಯ ಅಧಿಕಾರಿಗಳಿಗೆ ಕೋರಲು ಆದೇಶ ಹೊರಡಿಸಲಾಗಿದೆ.

**ಪ್ರಾಧಿಕೃತ ಅಧಿಕಾರಿ ಹಾಗೂ**
**ಉಪ ಅರಣ್ಯ ಸಂರಕ್ಷಣಾಧಿಕಾರಿ**
**ತುಮಕೂರು ವಿಭಾಗ, ತುಮಕೂರು.**

**ಪಿ.ಆರ್. 1029**

## IN THE COURT OF HON'BLE 1ST A.C.M.M., NRUPATHUNGA ROAD, BANGALORE

**Sub : Publish Unclaimed Two Wheeler in Karnataka Gazette.**

With reference to the above subject I hereby directed to publish the 26 (Twenty Six) Unclaimed Two Wheelers concerned to Vijayanagara Police Station in Karnataka Gazette. The Particulars of the vehicle are as follows

| Sl No. | Vehicle Type | Vehicle Number | Engine No | Chassis No |
|---|---|---|---|---|
| 1 | Luna | CKN-1955 | Nil | Nil |
| 2 | Bajaj Boxer | KA-02-EF-5181 | DFMBJC65734 | DFFBJC29787 |
| 3 | Yamaha RX-135 | KA-05-R-448 | 145270188 | 99L145270188 |
| 4 | TVS – 50 | KA-02-Y-241 | A904F111762 | A904F111762 |
| 5 | Suzuki – 100 | KA-02-U-6364 | 9704M843485 | 9704F797656 |
| 6 | TVS – XL 50 | KA-03-EC-6528 | P1103N408369 | P1103F413394 |
| 7 | TVS XL Super | KA-02-EB-8225 | P1010M332379 | P1010F335573 |
| 8 | Kinetic Honda | KA-02-H-2109 | NIEGJ225454 | NIF229175 |
| 9 | Bajaj Chetak | KA-09-L-2454 | Nil | 06F95K41796 |
| 10 | Honda Activa | KA-05-EZ-1808 | JF08E9237313 | ME4JF082L52058447 |
| 11 | TVS Victor | KA-07-K-3612 | 0F1C41167187 | MD625AF1241C18095 |
| 12 | Yamaha RX-100 | KA-02-H-7220 | IL1111369 | IL1111369 |
| 13 | TVS Viktor G.L . | KA-02-R-9343 | OFIN51483160 | MD625AF1952 |
| 14 | HERO Honda Splender | KA-06-8386 | 98B17E08123 | 98B19F8008 |
| 15 | Yamaha RX-100 | KA-18-H-1748 | 145304131 | 00B105304131 |
| 16 | TVS Viktor | KA-04-EK-7774 | 0F1C61509678 | MD625AF1061C16204 |
| 17 | Bajaj kawasaki | CKH-9806 | 30E083137 | 800084212 |
| 18 | Honda Activa | KA-05-EH-253 | JF08E0024202 | MEJF085L18024127 |
| 19 | Yamaha RX-135 | Nil | 1L5039794 | 96J1L5039794 |
| 20 | HERO Honda Splender | KA-02-EY-8375 | 07C15E3574 | 07C16F41527 |
| 21 | Kinetic Honda | KA-05-S-7928 | 589333NIEMD | NIFMM891306 |
| 22 | Kinetic Honda | KA-02-J-4650 | 150975NIETA | NIFTA154154 |
| 23 | TVS – XL Super | KA-02-HC-2152 | 0D1D81411595 | MD621BD1482A13612 |
| 24 | Bajaj Chetak | KA-02-S-1492 | Nil | 509059 |
| 25 | Yamaha RX | KA-08-H-3226 | 1L1428224 | L1428224E94 |
| 26 | Suzuki Sumurai | KA-02-MR-4143 | 7102M912705 | 20F859866 |

**Ist Addl. Chief Metropolitan Magistrate**
**Bangalore.**

**P R 1065**

## ಕಾರ್ಮಿಕ ಅಧಿಕಾರಿ ಹಾಗು ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ ವಿಭಾಗ-1, ಬಳ್ಳಾರಿ

**ಸಂ.ಕಾಅಬ-1/ಕಾನಪ/ಸಿಆರ್-106 /2012, ದಿನಾಂಕ: 12-07-2012**

**ಅರ್ಜಿದಾರರು**

1. ಶ್ರೀ.ದಸರ ಓಬಣ್ಣ @ ಓಬಯ್ಯ ತಂದೆ ದಿ॥ ಅಂದನಹಳ್ಳಿ ಓಬಣ್ಣ,
2. ಪಂಪಮ್ಮ ಗಂಡ ದಸರ ಓಬಣ್ಣ @ ಓಬಯ್ಯ.

ವಾಸ :-ಹಲಗರ ಗ್ರಾಮ, ಕೂಡ್ಲಿಗಿ, ತಾಲೂಕು ಬಳ್ಳಾರಿ ಜಿಲ್ಲೆ.

ವಿರುದ್ಧ

**ಪ್ರತಿವಾದಿಗಳು**

1. ಶ್ರೀ. ಬಿ. ಸುಧಾಕರ, ಮೇನ್ ಕಾಂಟ್ರಕ್ಟರ್. ಮೆ॥ ಎನ್ ಮಾಸ್ ಓ & ಎಂ ಸರ್ವಿಸ್ ಪ್ರೈವೇಟ್ ಲಿಮಿಟೆಡ್. ಕೇರಾಫ್. ಮೆ॥ ಹೊತ್ತೋರ್ ಸ್ಟೀಲ್ಸ್, ಹಲಕುಂದಿ ಗ್ರಾಮದ ಹತ್ತಿರ ಬಳ್ಳಾರಿ ಜಿಲ್ಲೆ.
2. ಶ್ರೀ. ಮೂನಿರ್ ಸಬ್ ಕಾಂಟ್ರಕ್ಟರ್. ಮೆ॥ ಎನ್ ಮಾಸ್ ಓ & ಎಂ ಸರ್ವಿಸ್ ಪ್ರೈವೇಟ್ ಲಿಮಿಟೆಡ್. ಕೇರಾಫ್. ಮೆ॥ ಹೊತ್ತೋರ್ ಸ್ಟೀಲ್ಸ್, ಹಲಕುಂದಿ ಗ್ರಾಮದ ಹತ್ತಿರ ಬಳ್ಳಾರಿ ಜಿಲ್ಲೆ.
3. ಶ್ರೀ. ಶ್ರೀನಿವಾಸ ಗುಪ್ತ, ಶಿಫ್ಟ್ ಇನ್‌ಚಾರ್ಜ, ಕೇರಾಫ್. ಮೆ॥ ಹೊತ್ತೋರ್ ಸ್ಟೀಲ್ಸ್, ಹಲಕುಂದಿ ಗ್ರಾಮದ ಹತ್ತಿರ ಬಳ್ಳಾರಿ ಜಿಲ್ಲೆ.
4. ಮ್ಯಾನೇಜಿಂಗ್ ಡೈರೆಕ್ಟರ್, ಕೇರಾಫ್. ಮೆ॥ ಹೊತ್ತೋರ್ ಸ್ಟೀಲ್ಸ್, ಹಲಕುಂದಿ ಗ್ರಾಮದ ಹತ್ತಿರ ಬಳ್ಳಾರಿ ಜಿಲ್ಲೆ.
5. ಮೆ॥ ಯುನೈಟೆಡ್ ಇಂಡಿಯಾ ಇನ್ಶೂರೆನ್ಸ್ ಕಂಪನಿ ಲಿಮಿಟೆಡ್.

**: ಪ್ರಕಟಣೆ :**

1] ಶ್ರೀ.ದಸರ ಓಬಣ್ಣ @ ಓಬಯ್ಯ 2] ಶ್ರೀಮತಿ ಪಂಪಮ್ಮ ಗಂಡ ದಸರ ಓಬಣ್ಣ @ ಓಬಯ್ಯ. ಇವರು ಶ್ರೀ. ದಿ॥ ಸುರೇಶ್ @ ಸುರಲಿಂಗಪ್ಪ, ಮೃತನ ತಂದೆ ತಾಯಿಯಾಗಿದ್ದು ಮೆ॥ ಹೊತ್ತೋರ್ ಸ್ಟೀಲ್ಸ್, ಹಲಕುಂದಿ ಗ್ರಾಮದ ಹತ್ತಿರ ಬಳ್ಳಾರಿ ಜಿಲ್ಲೆ. ಮೃತನು ಪ್ರತಿವಾದಿಯ ಸಂಸ್ಥೆಯಲ್ಲಿ ಕೆಲಸಮಾಡುತ್ತಿದ್ದರೆಂದು ದಿನಾಂಕ:17-02-2012 ರಂದು ತೀವ್ರ ಗಾಯಗಳಿಗೀಡಾಗಿ ಮೃತಪಟ್ಟಿದ್ದು ತಿಳಿಸಿ ತಾವು ಮೃತನ ವಾರಸುದಾರರು ಹಾಗೂ ಅವಲಂಬಿತರೆಂದು ನಷ್ಟ ಪರಿಹಾರ ಕೋರಿ ದಾವಾ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಸಂಬಂಧವಾಗಿ ಸಾರ್ವಜನಿಕರಿಗೂ ಹಾಗೂ ಸಂಬಂಧೀಕರಿಗೂ ತಿಳಿಯಪಡಿಸುವುದೇನೆಂದರೆ ಮೃತನ ವಾರಸುದಾರರು, ಅವಲಂಬಿತರು ಎಂದು ಪರಿಗಣಿಸಬೇಕೆಂದು ಬೇರೆ ಯಾರಾದರೂ ಕೋರುವುದಾದರೆ ಅಂಥವರು ಈ ಪ್ರಕಟಣೆಯನ್ನು ಕರ್ನಾಟಕ ರಾಜ್ಯ ಸರ್ಕಾರಿ ಹೊರ ಮುದ್ರಣಾಲಯ, ಬೆಂಗಳೂರು ಹಾಗೂ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ತಿಳಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಉಪ ವಿಭಾಗ-1, ಬಳ್ಳಾರಿ.**

**ಪಿ.ಆರ್. 1013**

## ಕಾರ್ಮಿಕ ಅಧಿಕಾರಿ ಹಾಗು ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ ವಿಭಾಗ-2, ಬಳ್ಳಾರಿ

**ಸಂಖ್ಯೆ:ಕಾಅಬ-2/ಕಾನಪ/ಸಿಆರ್-279/2012, ದಿನಾಂಕ:02-08-2012.**

**ಅರ್ಜಿದಾರರು**

1. ಶ್ರೀ ದ್ವಾರಕೀಶ್ ಹರಿಜನ ತಂದೆ ಸೀತಾರಾಮ್ ಹರಿಜನ @ ಸೀತಾಕುಮಾರ್‌ಹರಿಜನ, [ಮೃತನ ತಂದೆ]
2. ಶ್ರೀಮತಿ ಅರುಣಾದೇವಿ @ ಅರುಣಾ ಹರಿಜನ ಗಂಡ ದ್ವಾರಕೀಶ್ ಹರಿಜನ, [ಮೃತನ ತಾಯಿ]

ಇವರ ವಾಸ: ತೋರಣಗಲ್ಲು ಗ್ರಾಮ, ಸಂಡೂರು ತಾಲ್ಲೂಕು, ಬಳ್ಳಾರಿ ಜಿಲ್ಲೆ.

ವಿರುದ್ಧ

**ಪ್ರತಿವಾದಿಗಳು**

1. ಡೆಪ್ಯೂಟಿ ಜನರಲ್ ಮ್ಯಾನೇಜರ್, ಮೆ:ಮೆಕ್‌ನಲ್ಲಿ ಭಾರತ್ ಇಂಜಿನಿಯರಿಂಗ್ ಕಂ.ಲಿ., ಕುಡುತಿನಿ.
2. ದಿ ಡಿವಿಜನಲ್ ಮ್ಯಾನೇಜರ್, ಮೆ: ಯೂನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ.,

**:: ಪ್ರಕಟಣೆ ::**

ಈ ಮೇಲ್ಕಂಡ ಅರ್ಜಿದಾರರು ಮೃತ ಜಗತ್ @ ಜಗತ್ ಸೋನನಿ ರವರು 1ನೇ ಪ್ರತಿವಾದಿಯವರ ಸಂಸ್ಥೆಯಲ್ಲಿ ರಿಗ್ಗರ್/ಹೆಲ್ಪರ್‌ನಾಗಿ ಕೆಲಸ ನಿರ್ವಹಿಸುತ್ತಿದ್ದು, ದಿನಾಂಕ:27-01-2012ರಂದು 1ನೇ ಪ್ರತಿವಾದಿಯವರ ಆದೇಶದ ಮೇರೆಗೆ ಕಾರ್ಯನಿರ್ವಹಿಸುತ್ತಿದ್ದಾಗ ಅಪಘಾತ ಉಂಟಾಗಿ ಮೃತಪಟ್ಟಿರುತ್ತಾನೆಂದು, ಹಾಗೂ ತಾವು ಮೃತನ ವಾರಸುದಾರ ಮತ್ತು ಅವಲಂಬಿತರೆಂದು ಹೇಳಿ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ ಅಡಿಯಲ್ಲಿ ಮೃತನ ಬಾಬ್ತು ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ.

ಈ ಮೂಲಕ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಮೃತನಿಗೆ ಸಂಬಂಧಿಸಿದಂತೆ ಬೇರೆ ಯಾರಾದರೂ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೋರಿದಲ್ಲಿ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕ ಹಾಗೂ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಎ.ಎಂ.ಕೃಷ್ಣಮೂರ್ತಿ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು, ಉಪ ವಿಭಾಗ-2, ಬಳ್ಳಾರಿ.

**ಪಿ.ಆರ್. 1192**

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ ವಿಭಾಗ-2, ಬಳ್ಳಾರಿ.

**ಸಂಖ್ಯೆ:ಕಾಅಬ-2/ಕಾನಪ/ಸಿಆರ್-280/2012, ದಿನಾಂಕ:**

| ಅರ್ಜಿದಾರರು | | ಪ್ರತಿವಾದಿಗಳು |
|---|---|---|
| 1. ಶ್ರೀಮತಿ ಲತಾ ಮಜರಿ ಮಹಾನಂದ ಗಂಡ ಲೇಟ್ ಲಕ್ಷ್ಮೀಕಾಂತ್ ಮಹಾನಂದ @ ಸಂತೋಷಕುಮಾರ್ ಮಹಾನಂದ, [ಮೃತನ ಹೆಂಡತಿ] | | 1. ಡೆಪ್ಯೂಟಿ ಜನರಲ್ ಮ್ಯಾನೇಜರ್ ಮೆ:ಮೆಕ್‌ನಲ್ಲಿ ಭಾರತ್ ಇಂಜಿನಿಯರಿಂಗ್ ಕಂ.ಲಿ., ಕುಡುತಿನಿ. |
| 2. ತಾಜ್ ಕೇತನ್ ಮಹಾನಂದ ತಂದೆ ಲಕ್ಷ್ಮೀಕಾಂತ್ ಮಹಾನಂದ @ ಸಂತೋಷಕುಮಾರ್ ಮಹಾನಂದ, [ಮೃತನ ಮಗ] | **ವಿರುದ್ಧ** | 2. ದಿ ಡಿವಿಜನಲ್ ಮ್ಯಾನೇಜರ್, ಮೆ: ಯೂನೈಟೆಡ್ ಇಂಡಿಯಾ ಇನ್ಸೂರೆನ್ಸ್ ಕಂ.ಲಿ., |
| 3. ಕಿರಣ್‌ಕುಮಾರ್ ಮಹಾನಂದ ತಂದೆ ಲಕ್ಷ್ಮೀ ಕಾಂತ್ ಮಹಾನಂದ @ ಸಂತೋಷಕುಮಾರ್ ಮಹಾನಂದ, [ಮೃತನ ಮಗ] | | |

**ಇವರ ವಾಸ:** ತೋರಣಗಲ್ಲು ಪೋಸ್ಟ್, ಸಂಡೂರು ತಾಲ್ಲೂಕು, ಬಳ್ಳಾರಿ ಜಿಲ್ಲೆ.

**:: ಪ್ರಕಟಣೆ ::**

ಈ ಮೇಲ್ಕಂಡ ಅರ್ಜಿದಾರರು ಮೃತ ಲಕ್ಷ್ಮೀಕಾಂತ್ ಮಹಾನಂದ @ ಸಂತೋಷಕುಮಾರ್ ಮಹಾನಂದ ರವರು 1ನೇ ಪ್ರತಿವಾದಿಯವರ ಸಂಸ್ಥೆಯಲ್ಲಿ ಪಿಟ್ಟರ್‌ನಾಗಿ ಕೆಲಸ ನಿರ್ವಹಿಸುತ್ತಿದ್ದು, ದಿನಾಂಕ:27-01-2012ರಂದು 1ನೇ ಪ್ರತಿವಾದಿಯವರ ಆದೇಶದ ಮೇರೆಗೆ ಕಾರ್ಯನಿರ್ವಹಿಸುತ್ತಿದ್ದಾಗ ಅಪಘಾತ ಉಂಟಾಗಿ ಮೃತಪಟ್ಟಿರುತ್ತಾನೆಂದು, ಹಾಗೂ ತಾವು ಮೃತನ ವಾರಸುದಾರ ಮತ್ತು ಅವಲಂಬಿತರೆಂದು ಹೇಳಿ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ ಅಡಿಯಲ್ಲಿ ಮೃತನ ಬಾಬ್ತು ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ.

ಈ ಮೂಲಕ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಮೃತನಿಗೆ ಸಂಬಂಧಿಸಿದಂತೆ ಬೇರೆ ಯಾರಾದರೂ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೋರಿದಲ್ಲಿ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕ ಹಾಗೂ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಎ.ಎಂ.ಕೃಷ್ಣಮೂರ್ತಿ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು, ಉಪ ವಿಭಾಗ-2, ಬಳ್ಳಾರಿ.

**ಪಿ.ಆರ್. 1193**

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ ವಿಭಾಗ-2, ಬಳ್ಳಾರಿ.

**ಸಂಖ್ಯೆ:ಕಾಅಬ-2/ಕಾನಪ/ಸಿಆರ್-268/2012, ದಿನಾಂಕ:31-07-2012.**

| ಅರ್ಜಿದಾರರು | | ಪ್ರತಿವಾದಿಗಳು |
|---|---|---|
| 1] ಶ್ರೀ ಇಮಾಮ್‌ಸಾಬ್ ತಂದೆ ದಸ್ತಗಿರಿಸಾಬ್,<br>2] ಖಾದರ್‌ಬೀ ಗಂಡ ಇಮಾಮ್‌ಸಾಬ್,<br>3] ಮೌಲಾಲಿ ತಂದೆ ಇಮಾಮ್‌ಸಾಬ್,<br>4] ರೋಶನ್ ತಂದೆ ಇಮಾಮ್ ಸಾಬ್ ಎಸ್.<br>5] ಜುನೇದಾ ತಂದೆ ಇಮಾಮ್ ಸಾಬ್ ಎಸ್.<br>**ಇವರ ವಾಸ ಸ್ಥಳ :** ಕೌಲ್ ಬಜಾರ್, ಬಳ್ಳಾರಿ | ವಿರುದ್ಧ | 1. ಎಸ್. ಮಹಮ್ಮದ್ ಶರೀಫ್ ತಂದೆ ವಲಿಬಾಷ, ಆಟೋ ನಂ:ಕೆಎ-35/ಎ-5457ರ ಮಾಲೀಕರು, 18ನೇ ವಾರ್ಡ್, ಎಸ್.ಆರ್.ನಗರ, ಹೊಸಪೇಟೆ, ಬಳ್ಳಾರಿ ಜಿಲ್ಲೆ.<br>2. ದಿ ಬ್ರಾಂಚ್ ಮ್ಯಾನೇಜರ್, ಮೆ: ಶ್ರೀರಾಮ ಜನರಲ್ ಇನ್ಸೂರೆನ್ಸ್ ಕಂಪನಿ., ಲಿ., ಬೆಂಗಳೂರು. |

**:: ಪ್ರಕಟಣೆ ::**

ಈ ಮೇಲ್ಕಂಡ ಅರ್ಜಿದಾರರು ಮೃತ ವಜೀದ್ @ ವಜೀದ್‌ಬಾಷ ರವರು 1ನೇ ಪ್ರತಿವಾದಿಯ ಮಾಲೀಕತ್ವದ ಆಟೋ ನಂ: ಕೆಎ-35/ಎ-5457ರಲ್ಲಿ ಚಾಲಕನಾಗಿ ಕೆಲಸ ನಿರ್ವಹಿಸುತ್ತಿದ್ದು, ದಿನಾಂಕ: 16-02-2010ರಂದು 1ನೇ ಪ್ರತಿವಾದಿಯವರ ಆದೇಶದ ಮೇರೆಗೆ ಕಾರ್ಯನಿರ್ವಹಿಸುತ್ತಿದ್ದಾಗ ಅಪಘಾತ ಉಂಟಾಗಿ ಮೃತಪಟ್ಟಿರುತ್ತಾನೆಂದು, ಹಾಗೂ ತಾವು ಮೃತನ ವಾರಸುದಾರ ಮತ್ತು ಅವಲಂಬಿತರೆಂದು ಹೇಳಿ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ ಅಡಿಯಲ್ಲಿ ಮೃತನ ಬಾಬ್ತು ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ.

ಈ ಮೂಲಕ ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಮೃತನಿಗೆ ಸಂಬಂಧಿಸಿದಂತೆ ಬೇರೆ ಯಾರಾದರೂ ವಾರಸುದಾರರು ಎಂದು ಪರಿಗಣಿಸಬೇಕೆಂದು ಕೋರಿದಲ್ಲಿ, ಅಂಥವರು ಈ ಪ್ರಕಟಣೆ ಈ ನ್ಯಾಯಾಲಯದ ನಾಮಫಲಕ ಹಾಗೂ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಎ.ಎಂ.ಕೃಷ್ಣಮೂರ್ತಿ**
ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ
ಪರಿಹಾರ ಆಯುಕ್ತರು, ಉಪ ವಿಭಾಗ-2, ಬಳ್ಳಾರಿ.

**ಪಿ.ಆರ್. 1194**

## ಕಾರ್ಮಿಕ ಅಧಿಕಾರಿ ಹಾಗು ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ ವಿಭಾಗ-1, ಬಳ್ಳಾರಿ

**ಸಂ.ಕಾಅಬ-1/ಕಾನಪ/ಸಿಆರ್-115 /2012, ದಿನಾಂಕ: 08-08-2012**

| ಅರ್ಜಿದಾರರು | | ಪ್ರತಿವಾದಿಗಳು |
|---|---|---|
| 1. ಶ್ರೀಮತಿ, ರೇಣುಕಮ್ಮ ಗಂಡ ದಿ॥ ರಾಮಸ್ವಾಮಿ @ ರಾಮಪ್ಪ. ವಯಸ್ಸು 40 ವರ್ಷ.<br>2. ಶ್ರೀ. ಹನುಮಂತ ತಂದೆ ದಿ॥ ರಾಮಸ್ವಾಮಿ @ ರಾಮಪ್ಪ. ವಯಸ್ಸು 20 ವರ್ಷ.<br>3. ಕುಮಾರಿ. ಹುಲಿಗೆಮ್ಮ ತಂದೆ ದಿ॥ ರಾಮಸ್ವಾಮಿ @ ರಾಮಪ್ಪ. ವಯಸ್ಸು 18 ವರ್ಷ.<br>4. ಕುಮಾರ. ಮೂರ್ತಿ ತಂದೆ ದಿ॥ ರಾಮಸ್ವಾಮಿ @ ರಾಮಪ್ಪ.ವಯಸ್ಸು 15 ವರ್ಷ.<br>5. ಶ್ರೀ. ಕಂಬಳಿ ಜಂಬಪ್ಪ ತಂದೆ ರಾಮಪ್ಪ, ವಯಸ್ಸು 62 ವರ್ಷ.<br>6. ಶ್ರೀಮತಿ. ಲಿಂಗಮ್ಮ ಗಂಡ ಕಂಬಳಿ ಜಂಬಪ್ಪ. ವಯಸ್ಸು 55 ವರ್ಷ.<br>**ವಾಸ :** ವೆಂಕಟಾಪುರ ಗ್ರಾಮ, ಹೊಸಪೇಟೆ ತಾಲೂಕು ಬಳ್ಳಾರಿ ಜಿಲ್ಲೆ. | ವಿರುದ್ಧ | 1. ದಿ. ಮ್ಯಾನೇಜಿಂಗ್ ಡೈರೆಕ್ಟರ್ ಮೆ॥ ಬಿ.ಎಂ.ಎಂ.ಇಸ್ಪಾತ್ ಫ್ಯಾಕ್ಟರಿ ಲಿಮಿಟೆಡ್. ದಾನಪುರ ಗ್ರಾಮ, ಹೊಸಪೇಟೆ ತಾಲೂಕು ಬಳ್ಳಾರಿ.<br>2. ಕೆ. ವೇಣುಗೋಪಾಲ, ಕಾನ್‌ಟ್ರಕ್ಟರ್, ಮೆ॥ ಅನುಗ್ರಹ ಅರ್ಥೊ ಮೂವಿಂಗ್ ಟೆಕ್ನಾಲೋಜಿಸ್. ಹನುಮನಹಳ್ಳಿ ಹೊಸಪೇಟೆ ತಾಲೂಕು ಬಳ್ಳಾರಿ ಜಿಲ್ಲೆ-583222. |

: ಪ್ರಕಟಣೆ :

ಈ ಮೇಲೆ ತಿಳಿಸಿದ (1 ರಿಂದ 6) ಅರ್ಜಿದಾರರು ಮೃತನ ವಾರಸುದಾರರಾಗಿದ್ದು, ಮೃತ ಶ್ರೀ. ದಿ॥ ರಾಮಸ್ವಾಮಿಯು ಮೆ॥ ಬಿ.ಎಂ.ಎಂ. ಫ್ಯಾಕ್ಟ್ರಿಯಲ್ಲಿ ಲೇಬರ್ ಆಗಿ ಕೆಲಸ ಮಾಡುತ್ತಿದ್ದರೆಂದು ದಿನಾಂಕ: 28-04-2011 ರಂದು ತೀವ್ರ ಗಾಯಗಳಿಗೀಡಾಗಿ ಮೃತಪಟ್ಟದ್ದಾನೆಂದು ತಿಳಿಸಿ ತಾವು ಮೃತನ ವಾರಸುದಾರರು ಹಾಗೂ ಅವಲಂಬಿತರೆಂದು ನಷ್ಟ ಪರಿಹಾರ ಕೋರಿ ದಾವಾ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಸಂಬಂಧವಾಗಿ ಸಾರ್ವಜನಿಕರಿಗೂ ಹಾಗೂ ಸಂಬಂಧಿಕರಿಗೂ ತಿಳಿಯಪಡಿಸುವುದೇನೆಂದರೆ ಮೃತನ ವಾರಸುದಾರರು, ಅವಲಂಬಿತರು ಎಂದು ಪರಿಗಣಿಸಬೇಕೆಂದು ಬೇರೆ ಯಾರಾದರೂ ಕೋರುವುದಾದರೆ ಅಂಥವರು ಈ ಪ್ರಕಟಣೆಯನ್ನು ಕರ್ನಾಟಕ ರಾಜ್ಯ ಸರ್ಕಾರಿ ಹೊರ ಮುದ್ರಣಾಲಯ, ಬೆಂಗಳೂರು ಹಾಗೂ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ತಿಳಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ**
**ಪಿ.ಆರ್. 1248** **ಪರಿಹಾರ ಆಯುಕ್ತರು, ಉಪ ವಿಭಾಗ-1, ಬಳ್ಳಾರಿ.**

**ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ ಪರಿಹಾರಆಯುಕ್ತರವರ ನ್ಯಾಯಾಲಯ, ಕೊಪ್ಪಳ ಜಿಲ್ಲೆ, ಕೊಪ್ಪಳ**

**ಪ್ರಕರಣ ಸಂ:ಕಾಅಕೊ:ಕಾನಪ: ಮರಣ ಪ್ರಕರಣ- 65/2012, ದಿನಾಂಕ: 13-08-2012.**

**ಅರ್ಜಿದಾರರು**

1) ಹನುಮಪ್ಪ ತಂದೆ ಹನುಮಪ್ಪ ವಯಸ್ಸು: 46 ವರ್ಷ, ಉದ್ಯೋಗ : ಖಾಲಿ.
2) ಶ್ರೀಮತಿ ಹುಲಿಗೆಮ್ಮಗಂಡ ಹನುಮಪ್ಪ ವಯಸ್ಸು: 45 ವರ್ಷ, ಉದ್ಯೋಗ : ಮನೆಕೆಲಸ, ಈರ್ವರು ಸಾ: ಕನಕಗಿರಿ,

ತಾ: ಗಂಗಾವತಿ, ಜಿ: ಕೊಪ್ಪಳ.

**ಪ್ರತಿವಾದಿಗಳು**

1) ಶ್ರೀ ಉಮೇಶ ತಂದೆ ರುದ್ರಪ್ಪದೇವರೆಡ್ಡಿ, ವಯಸ್ಸು : 45 ವರ್ಷ, ಉದ್ಯೋಗ: ಒಕ್ಕಲುತನ ಮತ್ತು ಟ್ರಾಕ್ಟರ್ ಮಾಲೀಕರು, ಟ್ರ್ಯಾಕ್ಟರ್ & ಟ್ರೇಲರ್ ನಂ: ಕೆ.ಎ: 37/ಟಿ-9010 & ಕೆ.ಎ. 37/ಟಿ-9011. ಸಾ: ಕನಕಗಿರಿ, ತಾ: ಗಂಗಾವತಿ.
2) ದಿ ಡಿವಿಷನಲ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಸುರೆನ್ಸ್, ಕಂ. ಲಿ., ಬ್ರ್ಯಾಂಚ್ ಆಫೀಸ್ ಸನ್ಮಾನ್ ಟೂರಿಸ್ಟ್ ಕಾಂಪ್ಲೆಕ್ಸ್- ಎಸ್.ಬಿ.ಎಸ್.ಸರ್ಕಲ್, ಇಸ್ಲಾಂಪೂರ-ಗಂಗಾವತಿ.

**:: ಪ್ರಕಟಣೆ ::**

ಸಾರ್ವಜನಿಕರಿಗೆ ಮತ್ತು ಸಂಬಂಧ ಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ : ನಿಂಗಪ್ಪ ತಂದೆ ಹನುಮಪ್ಪ ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ, ದಿನಾಂಕ: 14-04-2012 (ಪಿ.ಎಂ.ರಿಪೋರ್ಟ್‌ನಂತೆ) ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕನಷ್ಟ ಪರಿಹಾರ ಕಾಯ್ದೆ 1923 ರ ಅಡಿಯಲ್ಲಿ ಪರಿಹಾರ ಧನ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡು ಮೃತ: ನಿಂಗಪ್ಪ ತಂದೆ ಹನುಮಪ್ಪ ಇವರ ವಾರಸುದಾರರಾದ 1) ಶ್ರೀ ಹನುಮಪ್ಪ ತಂದೆ ಹನುಮಪ್ಪ, ವಯಸ್ಸು: 46 ವರ್ಷ, ತಾ: ಗಂಗಾವತಿ, ಜಿ: ಕೊಪ್ಪಳ ಮತ್ತು 2) ಶ್ರೀಮತಿ ಹುಲಿಗೆಮ್ಮ ಗಂಡ ಹನುಮಪ್ಪ ವಯಸ್ಸು : 45 ವರ್ಷ, ಈರ್ವರು ಸಾ: ಕನಕಗಿರಿ, ತಾ: ಗಂಗಾವತಿ, ಜಿ: ಕೊಪ್ಪಳ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಗೊಂಡ ಅಥವಾ ಸ್ಥಳೀಯ ದಿನ ಪತ್ರಿಕೆಯಲ್ಲಿ ಪ್ರಕಟಣೆಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನು ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

**ಕೆ.ಪಿ.ಮುಸಿಯಪ್ಪ,**
**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,**
**ಪಿ.ಆರ್. 1098** **ಕೊಪ್ಪಳ ಜಿಲ್ಲೆ, ಕೊಪ್ಪಳ.**

## ಕಾರ್ಮಿಕ ಅಧಿಕಾರಿಗಳು ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಕೊಪ್ಪಳ ಜಿಲ್ಲೆ, ಕೊಪ್ಪಳ

**ಪ್ರಕರಣ ಸಂ:ಕಾಅಕೊ:ಕಾನಪ: ಮರಣ ಪ್ರಕರಣ– 66/2012, ದಿನಾಂಕ: 13–08–2012.**

**ಅರ್ಜಿದಾರರು**

1) ಪಿಲ್ಲಿ ಸತ್ಯನಾರಾಯಣ ತಂದೆ ಪಿಲ್ಲಿ ವೀರರಾಜು, ವಯಸ್ಸು: 50 ವರ್ಷ, ಉದ್ಯೋಗ : ಖಾಲಿ.

2) ಪಿಲ್ಲಿಭವಾನಿ ಗಂಡ ಸತ್ಯನಾರಾಯಣ , ವಯಸ್ಸು: 46 ವರ್ಷ, ಉದ್ಯೋಗ: ಮನೆಕೆಲಸ, ಈರ್ವರು ಸಾ: ಹೆಬ್ಬಾಳ ಕ್ಯಾಂಪ್, ತಾ: ಗಂಗಾವತಿ, ಜಿ: ಕೊಪ್ಪಳ.

**ಪ್ರತಿವಾದಿಗಳು**

1) ಎನ್.ನಾಗಲಿಂಗಪ್ಪ ತಂದೆ ಬೆಟ್ಟಪ್ಪ ವಯಸ್ಸು: 38 ವರ್ಷ, ಉದ್ಯೋಗ : ಒಕ್ಕಲುತನ ಮತ್ತು ನೆಲ್ಲುಕೊಯ್ಯುವ ಮಷಿನ್ ಮತ್ತು ಲಾರಿ ನಂ:ಕೆ.ಎ.36/ಎ41 ಮಾಲೀಕರು. ಸಾ: ಇ.ಜೆ.ಹೊಸಳ್ಳಿ ಕ್ಯಾಂಪ, ಪೊ: ಅಮರಾಪೂರ, ತಾ: ಸಿಂಧನೂರು, ಜಿ: ರಾಯಚೂರು.

2) ದಿ ಡಿವಿಷನಲ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಸುರೆನ್ಸ್, ಕಂ.ಲಿ., ಡಿವಿಜನಲ್ ಕಛೇರಿ, ಗಾಂಧೀಚೌಕ್, ರಾಯಚೂರು.

**:: ಪ್ರಕಟಣೆ ::**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ : ರಾಮಬಾಬು ಎಂಬುವವರು ಪ್ರತಿವಾದಿಯವರಲ್ಲಿ ಕೆಲಸ ನಿರ್ವಹಿಸುತ್ತಿರುವಾಗ, ದಿನಾಂಕ: 22–02–2010 (ಪಿ.ಎಂ.ರಿಪೋರ್ಟ್‌ನಂತೆ) ರಂದು ಕೆಲಸದಿಂದುಂಟಾದ ಅಪಘಾತದಿಂದ ಮೃತ ಹೊಂದಿರುತ್ತಾರೆ ಎಂದು ವಿವರಿಸುತ್ತಾ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923 ರ ಅಡಿಯಲ್ಲಿ ಪರಿಹಾರ ಧನ ಕೋರಿ ಅವಲಂಬಿತ ವಾರಸುದಾರರೆಂದು ಹೇಳಿಕೊಂಡು ಮೃತ: ನಿಂಗಪ್ಪ ತಂದೆ ಹನುಮಪ್ಪ ಇವರ ವಾರಸುದಾರರಾದ 1) ಶ್ರೀ ಪಿಲ್ಲಿ ಸತ್ಯನಾರಾಯಣ ತಂದೆ ಪಿಲ್ಲಿ ವೀರರಾಜು ಮತ್ತು 2) ಶ್ರೀಮತಿ ಪಿಲ್ಲಿಭವಾನಿ ಗಂಡ ಸತ್ಯನಾರಾಯಣ, ತಾ: ಗಂಗಾವತಿ, ಜಿ: ಕೊಪ್ಪಳ ಎಂಬುವವರು ಈ ನ್ಯಾಯಾಲಯಕ್ಕೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆದಕಾರಣ ಈ ಬಗ್ಗೆ ಆಕ್ಷೇಪಣೆ ಇದ್ದಲ್ಲಿ ತಾವೇನಾದರೂ ಅಥವಾ ತಾವೂ ಸಹ ಮೃತ ಹೊಂದಿದವರ ನಿಜವಾದ ವಾರಸುದಾರರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂಥವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರದರ್ಶಿಸಿದ ಅಥವಾ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಗೊಂಡ ಅಥವಾ ಸ್ಥಳೀಯ ದಿನ ಪತ್ರಿಕೆಯಲ್ಲಿ ಪ್ರಕಟಣೆಗೊಂಡ 30 ದಿನಗಳೊಳಗಾಗಿ ಆಕ್ಷೇಪಣೆ ಅಥವಾ ಅರ್ಜಿ ಸಲ್ಲಿಸಬಹುದಾಗಿದೆ ಎಂದು ಮತ್ತು ಸದರಿ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಅಥವಾ ಅರ್ಜಿ ಬಾರದಿದ್ದಲ್ಲಿ ಸದರಿ ಅವಧಿ ಮುಗಿದ ನಂತರ ಮೇಲ್ಕಾಣಿಸಿದ ಅರ್ಜಿದಾರರ ಅರ್ಜಿಯನ್ನು ಮುಂದಿನ ವಿಚಾರಣೆಗಾಗಿ ತೆಗೆದುಕೊಳ್ಳಲಾಗುವುದೆಂದು ಈ ಪ್ರಕಟಣೆ ಮೂಲಕ ತಿಳಿಯಪಡಿಸಲಾಗಿದೆ.

**ಕೆ.ಪಿ.ಮುಸಿಯಪ್ಪ,**
**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,**
**ಕೊಪ್ಪಳ ಜಿಲ್ಲೆ, ಕೊಪ್ಪಳ.**

**ಪಿ.ಆರ್. 1099**

## ಆಯುಕ್ತರ ಕಛೇರಿ, ಪೌರಾಡಳಿತ ನಿರ್ದೇಶನಾಲಯ

**ಅಧಿಸೂಚನೆ**

**ಸಂಖ್ಯೆ:ಪೌನಿ/ಮಾಹಅ/ಸಿಆರ್/246/2012–13, ದಿನಾಂಕ:30.08.2012**

ಕೇಂದ್ರ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ 2005ರ ಪ್ರಕರಣ 5(1) ರನ್ವಯ ಪೌರಾಡಳಿತ ನಿರ್ದೇಶನಾಲಯಕ್ಕೆ ಸಂಬಂಧಿಸಿದಂತೆ, ಈ ಕೆಳಕಂಡ ಪ್ರಾಧಿಕಾರಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಗೊತ್ತುಪಡಿಸಲಾಗಿದೆ.

| **ಆಡಳಿತ ಶಾಖೆ:** | **ಅಧಿಕಾರಿಗಳ ಹೆಸರು ಶ್ರೀಮತಿ/ಶ್ರೀಯುತರು:** | **ನಾಮ ನಿರ್ದೇಶಿತ ಹುದ್ದೆ** |
|---|---|---|
| ಜಂಟಿ ನಿರ್ದೇಶಕರು (ಆಡಳಿತ) | ಅಕ್ರಂಪಾಷಾ, ಕ.ಆ.ಸೇ. | ಮೇಲ್ಮನವಿ ಪ್ರಾಧಿಕಾರಿ |
| ಸಹಾಯಕ ನಿರ್ದೇಶಕರು (ಆಡಳಿತ) ಪ್ರಭಾರ | ಎ.ಎಸ್.ರಾಯ್ಕರ್, ಕೆ.ಎಂ.ಎ.ಎಸ್. | ಸಾರ್ವಜನಿಕ ಮಾಹಿತಿ ಅಧಿಕಾರಿ |
| ಕೇಂದ್ರಸ್ಥಾನಿಕ ಸಹಾಯಕರು | ಎ.ಎಸ್.ರಾಯ್ಕರ್, ಕೆ.ಎಂ.ಎ.ಎಸ್ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ |
| **ಅಭಿವೃದ್ದಿ ಶಾಖೆ:** | | |
| ಜಂಟಿ ನಿರ್ದೇಶಕರು (ಅಭಿವೃದ್ದಿ) | ಸಿ.ಜಿ.ಸುಪ್ರಸನ್ನ, ಕೆ.ಎಂ.ಎ.ಎಸ್. | ಮೇಲ್ಮನವಿ ಪ್ರಾಧಿಕಾರಿ |
| ಸಹಾಯಕ ನಿರ್ದೇಶಕರು (ಅಭಿವೃದ್ದಿ) | ಎಂ.ಬಿ.ತುಷಾರಮಣಿ, ಕೆ.ಎಂ.ಎ.ಎಸ್. | ಸಾರ್ವಜನಿಕ ಮಾಹಿತಿ ಅಧಿಕಾರಿ |
| ಸಹಾಯಕ ನಿರ್ದೇಶಕರು | ಕೆ.ಸುರೇಶ್ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ |

| | | |
|---|---|---|
| **ತಾಂತ್ರಿಕ ಶಾಖೆ/ಘನತ್ಯಾಜ್ಯ ವಸ್ತು ನಿರ್ವಹಣೆ ಶಾಖೆ:** | | |
| ಅಧೀಕ್ಷಕ ಅಭಿಯಂತರರು | ಬಿ.ಎಸ್.ಶಿವಕುಮಾರ್ | ಮೇಲ್ಮನವಿ ಪ್ರಾಧಿಕಾರಿ |
| ಕಾರ್ಯಪಾಲಕ ಅಭಿಯಂತರರು (ಎಸ್‌ಡಬ್ಲ್ಯೂಎಂ) (ಪ್ರಭಾರ) | ಎಸ್.ಎ.ಪ್ರಸಾದ್ | ಸಾರ್ವಜನಿಕ ಮಾಹಿತಿ ಅಧಿಕಾರಿ |
| ಸಹಾಯಕ ಕಾರ್ಯಪಾಲಕ ಅಭಿಯಂತರರು | ಎಸ್.ಎ.ಪ್ರಸಾದ್ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ |
| **ಲೆಕ್ಕ ಶಾಖೆ:** | | |
| ಜಂಟಿ ನಿರ್ದೇಶಕರು (ಹಣಕಾಸು) | ಎಂ.ವಜೀರ್ ಅಹಮದ್ ಕೆ.ಎಸ್.ಎ.ಎಸ್. | ಮೇಲ್ಮನವಿ ಪ್ರಾಧಿಕಾರಿ |
| ಸಹಾಯಕ ನಿರ್ದೇಶಕರು | ವಿಜಯಕುಮಾರ್ ಎಸ್.ತಿಪ್ಪಾ. | ಸಾರ್ವಜನಿಕ ಮಾಹಿತಿ ಅಧಿಕಾರಿ |
| ಲೆಕ್ಕಾಧೀಕ್ಷಕರು | ಕೆ.ಜೆ.ಪದ್ಮಿನಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ |
| **ಮಹಾನಗರಪಾಲಿಕೆಗಳು:** | | |
| ಜಂಟಿ ನಿರ್ದೇಶಕರು (ಆಡಳಿತ) | ಅಕ್ರಂಪಾಷಾ, ಕ.ಆ.ಸೇ. | ಮೇಲ್ಮನವಿ ಪ್ರಾಧಿಕಾರಿ |
| ಸಹಾಯಕ ನಿರ್ದೇಶಕರು | ಎಲ್.ಅನಂತರಾಮು | ಸಾರ್ವಜನಿಕ ಮಾಹಿತಿ ಅಧಿಕಾರಿ |
| ವ್ಯವಸ್ಥಾಪಕರು | ಶ್ರೀಮತಿ ಯಶೋಧ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ |

**ಆಯುಕ್ತರು**
ಪೌರಾಡಳಿತ ನಿರ್ದೇಶನಾಲಯ, ಬೆಂಗಳೂರು.

**ಪಿ.ಆರ್. 1254**

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.**

**ಸಂಖ್ಯೆ: ಕಾಅಚಿ/ಕಾನಪ/ಎಫ್/ಸಿಆರ್–315/2012, ದಿನಾಂಕ :27–07–2012**

**ಅರ್ಜಿದಾರರು**

1. ಶ್ರೀಮತಿ ಷಾಹಿದಾ ಬಾನು ಕೋಂ. ಲೇಟ್ ಮೊಹಮ್ಮದ್ ನಾಜಿರ್ ಅಲಿಯಾಸ್ ನಾಜಿರ್ ಅಲಿಯಾಸ್ ಅಬ್ದುಲ್ ನಾಜಿರ್, ವಾಸ: ನಲ್ಲೂರ್, ಚನ್ನಗಿರಿ (ತಾ), ದಾವಣಗೆರೆ (ಜಿ). ( ಇತರೆ ನಾಲ್ಕು ಜನರು )

**ವಿರುದ್ಧ**

**ಪ್ರತಿವಾದಿಗಳು**

1. ಶ್ರೀ ಎಂ.ಎನ್.ವೀರೇಂದ್ರ ಪಾಟೀಲ್ ತಂದೆ: ನಾಗಣ್ಣ ಗೌಡ, ಶ್ರೀ ಲಕ್ಷ್ಮೀ ಎಕ್ಸ್‌ಪ್ರೆಸ್ ಬಸ್ ಸಂಖ್ಯೆ:ಕೆಎ–17/ಬಿ–108 ರ ವಾಹನದ ಮಾಲೀಕರು, ವಾಸ: ಮೇದಗಿನಕೆರೆ, ಜಗಳೂರು (ತಾ), ದಾವಣಗೆರೆ (ಜಿ).
2. ದಿ ಬ್ರ್ಯಾಂಚ್ ಮ್ಯಾನೇಜರ್, ನ್ಯಾಷನಲ್ ಇನ್‌ಷೂರೆನ್ಸ್ ಕಂ. ಲಿ., ಬ್ರ್ಯಾಂಚ್ ಆಫೀಸ್, ಬಿ.ಎಂ.ಕಾಂಪ್ಲೆಕ್ಸ್, ಲಕ್ಷ್ಮೀ ಬಜಾರ್, ಚಿತ್ರದುರ್ಗ.

**:: ಅಧಿ ಪ್ರಕಟಣೆ ::**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶ್ರೀ ಮೊಹಮ್ಮದ್ ನಾಜಿರ್ ಅಲಿಯಾಸ್ ನಾಜಿರ್ ಅಲಿಯಾಸ್ ಅಬ್ದುಲ್ ನಾಜಿರ್, ಇವರು ಪ್ರತಿವಾದಿಯಲ್ಲಿ ಕೆಲಸವನ್ನು ನಿರ್ವಹಿಸುತ್ತಿರುವಾಗ ದಿನಾಂಕ:16–06–2011 ರಂದು ವಾಹನ ಅಪಘಾತ ಉಂಟಾಗಿ ಮೃತರಾದ ಪ್ರಯುಕ್ತ ಸಾವನ್ನಪ್ಪಿರುತ್ತಾರೆಂದು ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರ ಅಡಿಯಲ್ಲಿ ಪ್ರತಿವಾದಿಯಿಂದ ಪರಿಹಾರ ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ಮೃತನ ನಿಜವಾದ ಅವಲಂಬಿತರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಮೇಲೆ ನಿಗಧಿಪಡಿಸಿದ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ಪರಿಗಣಿಸಲಾಗುವುದು.

**ಎಸ್.ಆರ್.ವೀಣಾ**
ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

**ಪಿ.ಆರ್. 1096**

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.**

**ಸಂಖ್ಯೆ: ಕಾಅಚಿ/ಕಾನಪ/ಎಫ್/ಸಿಆರ್–318/2012, ದಿನಾಂಕ :01–08–2012**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| 1) ಶ್ರೀಮತಿ ಶೃತಿ ಎಂ. ಕೋಂ. ಲೇಟ್ ಕೆ. ತಿಪ್ಪೇರುದ್ರಪ್ಪ, ವಾಸ: ದೊಡ್ಡಸಿದ್ದವ್ವನ ಹಳ್ಳಿ, ಚಿತ್ರದುರ್ಗ (ತಾ) & (ಜಿ). ( ಇತರೆ ಮೂರು ಜನರು ). | | 1. ಶ್ರೀ ಮುಜಮಿಲ್ ಪಾಷಾ ತಂದೆ: ಅಬ್ದುಲ್ ಘನಿ, ಆಟೋ ರಿಕ್ಷಾ ಸಂಖ್ಯೆ:ಕೆಎ–16/ಎ–768ರ ವಾಹನದ ಮಾಲೀಕರು, ವಾಸ: ಅಗಸನಕಲ್ಲು, ಚಿತ್ರದುರ್ಗ (ತಾ), ಚಿತ್ರದುರ್ಗ (ಜಿ).<br>2. ದಿ ಬ್ರ್ಯಾಂಚ್ ಮ್ಯಾನೇಜರ್, ರಿಲಿಯನ್ಸ್ ಜನರಲ್ ಇನ್‌ಷೂರೆನ್ಸ್ ಕಂ. ಲಿ., ಬ್ರ್ಯಾಂಚ್ ಆಫೀಸ್, ಮಗನೂರು ಬಿಲ್ಡಿಂಗ್, ಬಿ.ಡಿ.ರಸ್ತೆ, ಚಿತ್ರದುರ್ಗ. |

**:: ಅಧಿ ಪ್ರಕಟಣೆ ::**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶ್ರೀ ಕೆ. ತಿಪ್ಪೇರುದ್ರಪ್ಪ ತಂದೆ: ಕೃಷ್ಣಪ್ಪ, ಇವರು ಪ್ರತಿವಾದಿಯಲ್ಲಿ ಕೆಲಸವನ್ನು ನಿರ್ವಹಿಸುತ್ತಿರುವಾಗ ದಿನಾಂಕ: 24–06–2012 ರಂದು ವಾಹನ ಅಪಘಾತ ಉಂಟಾಗಿ ಮೃತರಾದ ಪ್ರಯುಕ್ತ ಸಾವನ್ನಪ್ಪಿರುತ್ತಾರೆಂದು ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರ ಅಡಿಯಲ್ಲಿ ಪ್ರತಿವಾದಿಯಿಂದ ಪರಿಹಾರ ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ಮೃತನ ನಿಜವಾದ ಅವಲಂಬಿತರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಮೇಲೆ ನಿಗಧಿಪಡಿಸಿದ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ಪರಿಗಣಿಸಲಾಗುವುದು.

**ಎಸ್.ಆರ್.ವೀಣಾ**
ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

**ಪಿ.ಆರ್. 1097**

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.**

**ಸಂಖ್ಯೆ: ಕಾಅಚಿ/ಕಾನಪ/ಎಫ್/ಸಿಆರ್–320/2012, ದಿನಾಂಕ :03–08–2012**

| ಅರ್ಜಿದಾರರು | ವಿರುದ್ಧ | ಪ್ರತಿವಾದಿಗಳು |
|---|---|---|
| ಶ್ರೀ ಚಿನ್ನಸ್ವಾಮಿ ತಂದೆ: ಕುಪ್ಪನ್, ವಾಸ: ಪಿಳ್ಳೆಕೆರೆನಹಳ್ಳಿ, ಚಿತ್ರದುರ್ಗ (ತಾ), ಚಿತ್ರದುರ್ಗ (ಜಿ). | | 1. ಶ್ರೀ ಕೆ.ಆರ್.ರಂಗಸ್ವಾಮಿ ತಂದೆ: ಕಂದಸ್ವಾಮಿ, ಹವೆಸ್ಟರ್ ಸಂಖ್ಯೆ:ಟಿಎನ್–30/ಡಬ್ಲ್ಯು–6312 ರ ವಾಹನದ ಮಾಲೀಕರು, ವಾಸ: ಯರ್ರಿಸ್ವಾಮಿ, ಕೇರಾಫ್ ಈರಣ್ಣ, ಬನ್ನಪ್ಪ ನಿಲಯ, 3ನೇ ಕ್ರಾಸ್, ರಾಮನಗರ, ತಲೂರ್ ರಸ್ತೆ, ಬಳ್ಳಾರಿ ಟೌನ್.<br>2. ದಿ ಡಿವಿಜಿನಲ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್‌ಷೂರೆನ್ಸ್ ಕಂ. ಲಿ., ಡಿವಿಜಿನಲ್ ಆಫೀಸ್, ಎಂ.ಎಂ.ಕೆ. ಕಾಂಪ್ಲೆಕ್ಸ್, ಅಕ್ಕಮಹಾದೇವಿ ರಸ್ತೆ, ದಾವಣಗೆರೆ. |

**:: ಅಧಿ ಪ್ರಕಟಣೆ ::**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶ್ರೀ ಅನಿಲ್ ತಂದೆ: ಚಿನ್ನಸ್ವಾಮಿ, ಇವರು ಪ್ರತಿವಾದಿಯಲ್ಲಿ ಕೆಲಸವನ್ನು ನಿರ್ವಹಿಸುತ್ತಿರುವಾಗ ದಿನಾಂಕ:03–12–2008 ರಂದು ವಾಹನ ಅಪಘಾತ ಉಂಟಾಗಿ ಮೃತರಾದ ಪ್ರಯುಕ್ತ

ಸಾವನ್ನಪ್ಪಿರುತ್ತಾರೆಂದು ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರ ಅಡಿಯಲ್ಲಿ ಪ್ರತಿವಾದಿಯಿಂದ ಪರಿಹಾರ ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ಮೃತನ ನಿಜವಾದ ಅವಲಂಬಿತರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಮೇಲೆ ನಿಗಧಿಪಡಿಸಿದ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ಪರಿಗಣಿಸಲಾಗುವುದು.

**ಎಸ್.ಆರ್.ವೀಣಾ**
ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

**ಪಿ.ಆರ್. 1094**

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.**

**ಸಂಖ್ಯೆ: ಕಾಅಚಿ/ಕಾನಪ/ಎಫ್/ಸಿಆರ್–325/2012, ದಿನಾಂಕ :14–08–2012**

| **ಅರ್ಜಿದಾರರು** | **ವಿರುದ್ಧ** | **ಪ್ರತಿವಾದಿಗಳು** |
|---|---|---|
| 1) ಶ್ರೀಮತಿ ಸುಲೋಚನ ಕೋಂ. ಲೇಟ್ ಮಲ್ಲೇಶ್, ವಾಸ: ಯಲ್ಲಾಭೋವಿಹಟ್ಟಿ, ಹೊಸದುರ್ಗ (ತಾ), ಚಿತ್ರದುರ್ಗ (ಜಿ). (ಇತರೆ 7 ಜನರು ) | | 1. ಶ್ರೀ ಅರುಣ ಅಲಿಯಾಸ್ ಅರುಣ್ ಕುಮಾರ್ ತಂದೆ: ಚಂದ್ರಪ್ಪ, ಟ್ರ್ಯಾಕ್ಟರ್ ಸಂಖ್ಯೆ:ಕೆಎ–16/ಟಿ.ಎ–3295ರ ವಾಹನದ ಚಾಲಕ, ವಾಸ: ಜಾನಕಲ್ ದೇವರಹಟ್ಟಿ, ಹೊಸದುರ್ಗ (ತಾ), ಚಿತ್ರದುರ್ಗ (ಜಿ).<br>2. ಶ್ರೀ ರಾಜಪ್ಪ ತಂದೆ: ಸಣ್ಣ ಹಟ್ಟಪ್ಪ, ಟ್ರ್ಯಾಕ್ಟರ್ ಸಂಖ್ಯೆ: ಕೆಎ–16/ಟಿ.ಎ–3295ರ ವಾಹನದ ಮಾಲೀಕರು, ವಾಸ: ಜಾನಕಲ್ ದೇವರಹಟ್ಟಿ, ಹೊಸದುರ್ಗ (ತಾ), ಚಿತ್ರದುರ್ಗ (ಜಿ).<br>3. ದಿ ಬ್ರ್ಯಾಂಚ್ ಮ್ಯಾನೇಜರ್, ನ್ಯಾಷನಲ್ ಇನ್‌ಷೂರೆನ್ಸ್ ಕಂ. ಲಿ., ಬ್ರ್ಯಾಂಚ್ ಆಫೀಸ್, ಬಿ.ಎಂ.ಕಾಂಪ್ಲೆಕ್ಸ್, ಲಕ್ಷ್ಮೀ ಬಜಾರ್, ಚಿತ್ರದುರ್ಗ. |

**:: ಅಧಿ ಪ್ರಕಟಣೆ ::**

ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಮೃತ ಶ್ರೀ ಮಲ್ಲೇಶ್ ತಂದೆ: ಹುಲುಗಪ್ಪ, ಇವರು ಪ್ರತಿವಾದಿಯಲ್ಲಿ ಕೆಲಸವನ್ನು ನಿರ್ವಹಿಸುತ್ತಿರುವಾಗ ದಿನಾಂಕ: 22–08–2011 ರಂದು ವಾಹನ ಅಪಘಾತ ಉಂಟಾಗಿ ಮೃತರಾದ ಪ್ರಯುಕ್ತ ಸಾವನ್ನಪ್ಪಿರುತ್ತಾರೆಂದು ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ 1923ರ ಅಡಿಯಲ್ಲಿ ಪ್ರತಿವಾದಿಯಿಂದ ಪರಿಹಾರ ಕೋರಿ ಮೇಲ್ಕಂಡ ಅವಲಂಬಿತರು ಈ ನ್ಯಾಯಾಲಯದಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ತಾವೇನಾದರೂ ಮೃತನ ನಿಜವಾದ ಅವಲಂಬಿತರೆಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವುದಾದರೆ ಅಂತಹವರು ಈ ಪ್ರಕಟಣೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳ ಒಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಮೇಲೆ ನಿಗಧಿಪಡಿಸಿದ ಅವಧಿಯಲ್ಲಿ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಗಳಾಗಲೀ ಯಾರಿಂದಲೂ ಬರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಅರ್ಜಿಯನ್ನು ವಿಚಾರಣೆಗೆ ಪರಿಗಣಿಸಲಾಗುವುದು.

**ಎಸ್.ಆರ್.ವೀಣಾ**
ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ

**ಪಿ.ಆರ್. 1095**

**ಕಾರ್ಯನಿರ್ವಾಹಕ ಇಂಜಿನೀಯರ, ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ ಕಚೇರಿ ಶಿರಸಿ.**

**ಕಾರ್ಯನಿರ್ವಾಹಕ ಇಂಜಿನೀಯರು,ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ ಕಾರ್ಯಾಲಯದ**

**ಪ್ರಕಟಣೆ**

**ಕ್ರ.ಸಂ:-ಪಂರಾಇಂ/ವಿಶಿ/ಸಿ-1/ಮಾಹಅ/2012-13/**

2005 ರ ಮಾಹಿತಿ ಹಕ್ಕು ಅಧಿನಿಯಮ (2005 ರ ಕೇಂದ್ರ ಕಾಯಿದೆ 22) ರ ಅಡಿಯಲ್ಲಿ ಕಾರ್ಯನಿರ್ವಾಹಕ ಇಂಜಿನೀಯರರು ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ ಶಿರಸಿ ಕಚೇರಿಯನ್ನು ಸಾರ್ವಜನಿಕ ಪ್ರಾಧಿಕಾರವೆಂದು ಪರಿಗಣಿಸಿ ಸರ್ಕಾರಿ ಆದೇಶ ಸಂಖ್ಯೆ:- ಗ್ರಾ.ಅಪ/324/ಕೆಎಸ್ಎಎಸ್/2005 ದಿನಾಂಕ:- 23-9-2005 ರ ಪ್ರಕಾರ ಹಾಗೂ ಸದರಿ ಅಧಿನಿಯಮದ 5 (1) ಹಾಗೂ ಶೆಕ್ಷನ್-19 (1) ಪ್ರಕಾರ ಈ ಕೆಳಗಿನವರನ್ನು ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಮೇಲ್ಮನವಿ ಪ್ರಾಧಿಕಾರವೆಂದು ಗುರುತಿಸಿ ಆದೇಶಿಸಲಾಗಿದೆ.

| ಅ.ನಂ | ಕಚೇರಿ & ಪೂರ್ಣ ವಿಳಾಸ | ಸಾರ್ವಜನಿಕರ ಮಾಹಿತಿ ಅಧಿಕಾರಿ ಸೆಕ್ಷನ್-5 (1) | ಸಹಾಯಕ ಮಾಹಿತಿ ಅಧಿಕಾರಿ ಸೆಕ್ಷನ್-5 (2) | ಮೇಲ್ಮನವಿ ಪ್ರಾಧಿಕಾರ ಸೆಕ್ಷನ್-19 (1) |
|---|---|---|---|---|
| 1 | ಕಾರ್ಯನಿರ್ವಾಹಕ ಇಂಜಿನೀಯರ, ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ ಶಿರಸಿ (ಉ.ಕ) | ಲೆಕ್ಕ ಪರಿಶೋಧನಾಧಿಕಾರಿ. ಪಂ.ರಾ.ಇಂ, ವಿಭಾಗ, ಶಿರಸಿ. | ದ್ವಿತೀಯ ದರ್ಜೆ ಸಹಾಯಕರು. ಪಂ.ರಾ.ಇಂ, ವಿಭಾಗ, ಶಿರಸಿ. | ಕಾರ್ಯನಿರ್ವಾಹಕ ಇಂಜಿನೀಯರರು ಪಂಚಾಯತ್ ರಾಜ್ ಇಂಜಿನೀಯರಿಂಗ್ ವಿಭಾಗ ಶಿರಸಿ (ಉ.ಕ) |

**ಕೈಪಿಡಿ-1:**-ಸಂಸ್ಥೆಯ ವಿವರಗಳು ಮತ್ತು ಕರ್ತವ್ಯಗಳು ಮತ್ತು ವಿಧಿಗಳು.

ಕರ್ನಾಟಕ ರಾಜ್ಯದ ಉತ್ತರಕನ್ನಡ ಜಿಲ್ಲೆಯ ಘಟ್ಟದ ಮೇಲಿನ ತಾಲೂಕುಗಳಾದ ಶಿರಸಿ, ಸಿದ್ದಾಪುರ, ಯಲ್ಲಾಪುರ, ಮುಂಡಗೋಡ ಹಳಿಯಾಳ ಜೋಯಿಡಾ ಒಟ್ಟೂ 6 ತಾಲೂಕುಗಳ ಕಾರ್ಯವ್ಯಾಪ್ತಿಯನ್ನು ಹೊಂದಿರುವ ಈ ವಿಭಾಗವು ಉತ್ತರ ಕನ್ನಡ ಜಿಲ್ಲಾ ಪಂಚಾಯತ್ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿದ್ದು ಮೇಲ್ಕಂಡ ತಾಲೂಕುಗಳ ವ್ಯಾಪ್ತಿಗೊಳಪಟ್ಟ ಜಿಲ್ಲಾ ಪಂಚಾಯತ್ ವ್ಯಾಪ್ತಿಯಲ್ಲಿ ಬರುವ ರಸ್ತೆಗಳು, ಸೇತುವೆಗಳು, ಕುಡಿಯುವ ನೀರಿನ ವ್ಯವಸ್ಥೆ ಕಿರು ನೀರು ಸರಬರಾಜು ಯೋಜನೆಗಳು ಸರ್ಕಾರದ ವ್ಯಾಪ್ತಿಯಲ್ಲಿ ಬರುವ ವಿವಿಧ ಇಲಾಖೆಗಳ ಕಟ್ಟಡ ನಿರ್ಮಾಣ ಹಾಗೂ ನಿರ್ವಹಣೆ ಇತ್ಯಾದಿ ಕೆಲಸಗಳ ವ್ಯವಸ್ಥೆಗಾಗಿ ಈ ವಿಭಾಗವನ್ನು ಜುಲೈ-1987 ರಿಂದ ಅಸ್ತಿತ್ವಕ್ಕೆ ತರಲಾಗಿದೆ.ಈ ಕಾರ್ಯಾಲಯವು ಮುಖ್ಯ ಇಂಜಿನೀಯರ,ಪಂಚಾಯತ್ ರಾಜ್ ಇಂಜಿನೀಯರಿಂಗ್ ಇಲಾಖೆ ಬೆಂಗಳೂರು ಹಾಗೂ ಅಧೀಕ್ಷಕ ಇಂಜಿನೀಯರ, ಪಂಚಾಯತ್ ರಾಜ್ ಇಂಜಿನೀಯರಿಂಗ್ ವೃತ್ತ ಧಾರವಾಡ ರವರ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿದೆ.

ಹಾಗೂ ಉತ್ತರ ಕನ್ನಡ ಜಿಲ್ಲಾ ಪಂಚಾಯತ್ ಕಾರವಾರ ರವರ ನಿರ್ದೇಶನದಂತೆ ಕಾಮಗಾರಿಗಳನ್ನು ನಿರ್ವಹಿಸುವದು. 2009-10, 2010-11 ಮತ್ತು 2011-12 ರ ವರೆಗೆ ಈ ವಿಭಾಗದ ಅಧೀನದಲ್ಲಿ ಕಾರ್ಯನಿರ್ವಹಿಸಿದ ಕಾಮಗಾರಿಗಳು ಈ ಕೆಳಗಿನಂತಿವೆ.

**(ಅ) ರಸ್ತೆಗಳು,**

1) ಗ್ರಾಮೀಣ ರಸ್ತೆಗಳು.

**(ಬ) ಸೇತುವೆಗಳು.**

1) ಸಣ್ಣ ಸೇತುವೆಗಳು.

2) ಅಡ್ಡ ಮೋರಿಗಳು.

**(ಕ) ಕಟ್ಟಡಗಳು.**

1) ಮುಖ್ಯ ಕಟ್ಟಡಗಳು.

2) ಸಣ್ಣ ಕಟ್ಟಡಗಳು

**(ಡ) ಕುಡಿಯುವ ನೀರು.**

1) ನೀರು ಸರಬುರಾಜು ಯೋಜನೆಗಳು.

2) ಕಿರು ನೀರು ಸರಬರಾಜು ಯೋಜನೆಗಳು.

3) ಕೈಪಂಪು ಕೊಳವೆ ಬಾವಿಗಳು

ಈ ವಿಭಾಗಗಳ ಅಧೀನದಲ್ಲಿ ಬರುವ 6 ತಾಲೂಕಗಳನ್ನು 6 ಉಪ–ವಿಭಾಗಗಳನ್ನಾಗಿ ವಿಂಗಡಿಸಿ ಅವುಗಳ ಈ ವಿಭಾಗದ ಅಧೀನದಲ್ಲಿ ಕಾರ್ಯನಿರ್ವಹಿಸುತ್ತಿವೆ.

ಕಾರ್ಯನಿರ್ವಾಹಕ ಇಂಜಿನೀಯರವರು ಈ ವಿಭಾಗದ ಮುಖ್ಯಸ್ಥರಾಗಿರುತ್ತಾರೆ.ಇವರ ಅಧೀನದಲ್ಲಿ ಒಟ್ಟೂ 4 ಶಾಖೆಗಳು ಕಾರ್ಯನಿರ್ವಹಿಸುತ್ತಿವೆ.

1) ಆಡಳಿತ ಶಾಖೆ

2) ತಾಂತ್ರಿಕ ಶಾಖೆ

3) ಲೆಕ್ಕ ಪತ್ರ ಶಾಖೆ

4) ಉಗ್ರಾಣ ಶಾಖೆ.

**ಕೈಪಿಡಿ–2:–** ಸಂಸ್ಥೆಯ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದ ಅಧಿಕಾರ ಮತ್ತು ವಿಧಿಗಳ ವಿವರ.

ಕಾರ್ಯನಿರ್ವಾಹಕ ಇಂಜಿನೀಯರರ ಅಧೀನದಲ್ಲಿ ಈ ಕೆಳಗಿನ ಶಾಖೆಗಳು ಕಾರ್ಯನಿರ್ವಹಿಸುತ್ತಿವೆ.

1) **ಆಡಳಿತ ಶಾಖೆ;–** ಈ ಶಾಖೆಯಲ್ಲಿ ಒಬ್ಬ ಅಧೀಕ್ಷಕರು 2 ಜನ ದ್ವಿತೀಯ ದರ್ಜೆ ಸಹಾಯಕರು ಒಬ್ಬ ಪ್ರಥಮ ದರ್ಜೆ ಸಹಾಯಕರು ಒಬ್ಬ ಶೀಘ್ರಲಿಪಿಗಾರರು ಇಬ್ಬರು ಬೆರಳಚ್ಚುಗಾರರು 4 ಜನ ಜವಾನರು ಕಾರ್ಯನಿರ್ವಹಿಸುತ್ತಾರೆ.

ಅಧೀಕ್ಷಕರು ಶಾಖಾ ಮುಖ್ಯಸ್ಥರಾಗಿದ್ದು ಶಾಖೆಯ ಸಿಬ್ಬಂದಿಗಳಿಗೆ ಮಾರ್ಗದರ್ಶಕರಾಗಿದ್ದು ಶಾಖೆಯ ಮೇಲುಸ್ತುವಾರಿಯನ್ನು ನಿರ್ವಹಿಸುತ್ತಾರೆ, ಹಾಗೂ ವಿಭಾಗ ಕಾರ್ಯಾಲಯದ ಸಿಬ್ಬಂದಿ ವ್ಯವಹಾರಕ್ಕೆ ಸಂಬಂಧ ಪಟ್ಟ ಯಾವತ್ತೂಕಡತಗಳ ಪರಿಶೀಲನೆ ನಿಯಮಾವಳಿಗಳ ಉಲ್ಲೇಖಿಸುವಿಕೆ ಇತ್ಯಾದಿ ಕೆಲಸಗಳನ್ನು ನಿರ್ವಹಿಸುವರು. ಪ್ರಥಮ ದರ್ಜೆ ಸಹಾಯಕರ–1 ಹುದ್ದೆ, ಶೀಘ್ರಲಿಪಿಗಾರರ ಹುದ್ದೆ–1 ಹುದ್ದೆ ಖಾಲಿ ಇರುತ್ತವೆ. ಪ್ರಥಮ ದರ್ಜೆ ಸಹಾಯಕ ಹುದ್ದೆಯ ಕರ್ತವ್ಯಗಳನ್ನು ಎಂ.ಟಿ.ನಾಯ್ಕ, ದ್ವಿತೀಯ ದರ್ಜೆ ಸಹಾಯಕ ರವರು ಹೆಚ್ಚುವರಿಯಾಗಿ ನಿರ್ವಹಿಸುವರು. ಇವರು ಸಿಬ್ಬಂದಿ ಶಾಖೆಗೆ ಸಂಬಂಧಿಸಿದ ವಿಭಾಗ/ಉಪ ವಿಭಾಗ ಯಾವತ್ತು ಪತ್ರ ವ್ಯವಹಾರ, ಸೇವಾ ಪುಸ್ತಕ ನಿರ್ವಹಣೆ, ಮಾಸಿಕ ತ್ರೈಮಾಸಿಕ ಅರ್ಧವಾರ್ಷಿಕ ನಿಯತ ಕಾಲಿಕೆಗಳನ್ನು ಸಲ್ಲಿಸುವದು. ನಾಲ್ಕನೇ ದರ್ಜೆ ಗುತ್ತಿಗೆ ನೊಂದಣಿ, ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿಯಾಗಿ ಕೆಲಸ ನಿರ್ವಹಿಸುತ್ತಿದ್ದಾರೆ.

ಒಬ್ಬ ದ್ವಿತೀಯ ದರ್ಜೆ ಸಹಾಯಕರು ವೇತನ ಬಿಲ್ಲು,ಕಚೇರಿ ವೆಚ್ಚದ ಸಾದಿಲ್ವಾರು ಬಿಲ್ಲು, ವಾರ್ಷಿಕ ಸಿಬ್ಬಂದಿ ವೇತನಕ್ಕೆ ಹಾಗೂ ಸಾದಿಲ್ವಾರು ವೆಚ್ಚಕ್ಕೆ ಬೇಕಾಗುವ ಅಂದಾಜು ಪತ್ರಿಕೆ ತಯಾರಿಸುವದು, ಉಪ–ವಿಭಾಗಗಳಿಗೆ ಅನುದಾನ ಹಂಚಿಕೆ, ಪತ್ರ ವ್ಯವಹಾರ ಮಾಸಿಕ ವರದಿಗಳನ್ನು ಮೇಲಾಧಿಕಾರಿಗಳಿಗೆ ಸಲ್ಲಿಸುವದು, ವಿಭಾಗ ಕಾರ್ಯಾಲಯದ ಸಿಬ್ಬಂಧಿಯವರ ಪ್ರಯಾಣ ಭತ್ಯೆ ಬಿಲ್ಲುಗಳನ್ನು ತಯಾರಿಸುವುದು, ಕಛೇರಿ ಸಿಬ್ಬಂಧಿಗಳ ಸಾಂದರ್ಬಿಕ ರಜಾ ವಹಿ ನಿರ್ವಹಿಸುವುದು ಇತ್ಯಾದಿ ಮಾಡುತ್ತಿದ್ದಾರೆ. ಒಬ್ಬ ಬೆರಳಚ್ಚುಗಾರರು ದೈನಂದಿನ ಕಛೇರಿಯ ಪತ್ರಗಳನ್ನು ಗಣಕೀಕರಣ ಮಾಡುತ್ತಿದ್ದಾರೆ. ಒಬ್ಬ ಬೆರಳಚ್ಚುಗಾರರು ಆವಕ (Inword) ಕೆಲಸದ ಜೊತೆಗೆ ಕಚೇರಿಗೆ ಬರುವ ದೂರವಾಣಿ ಸ್ವೀಕರಿಸುವುದು ಹಾಗೂ ರವಾನಿಸುವ ಕೆಲಸವನ್ನು ನಿರ್ವಹಿಸುತ್ತಿದ್ದಾರೆ.

**ತಾಂತ್ರಿಕ ಶಾಖೆ :–** ಈ ಶಾಖೆಯಲ್ಲಿ 2 ಸಹಾಯಕ ಇಂಜಿನೀಯರ 5 ಕಿರಿಯ ಇಂಜಿನೀಯರ ಹುದ್ದೆ ಹಾಗೂ ಎರಡು ಆಕೃತಿ ರಚನಾಕಾರರ ಹುದ್ದೆ, 5 ಮೈಕಾನಿಕ ಹುದ್ದೆ, 1 ಪಂಪ ಮೈಕಾನಿಕ ಹುದ್ದೆ, 1 ಸಂಖ್ಯಾ ನಿರೀಕ್ಷಕರ ಹುದ್ದೆಗಳು ಮಂಜೂರಾಗಿರುತ್ತವೆ.ಅವುಗಳಲ್ಲಿ 2 ಸಹಾಯಕ ಇಂಜಿನೀಯರ್, 1 ಕಿರಿಯ ಇಂಜಿನೀಯರ ಹುದ್ದೆ, 1 ಸಂಖ್ಯಾನಿರೀಕ್ಷಕರ ಹುದ್ದೆ, 1 ಆಕೃತಿ ರಚನಾಕಾರರ ಹುದ್ದೆ, ಖಾಲಿ ಇರುತ್ತವೆ ಹಾಗೂ 4 ಜನ ಕಿರಿಯ ಇಂಜಿನೀಯರ ಒಬ್ಬರು ಆಕೃತಿ ರಚನಾಕಾರರು ಈ ಶಾಖೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಅವರು ನಿರ್ವಹಿಸುವ ಕಾರ್ಯಗಳು ಈ ಕೆಳಗಿನಂತಿವೆ.

**ಒಬ್ಬ ಕಿರಿಯ ಇಂಜಿನೀಯರ :–**ಎಲ್ಲಾ 6 ಉಪವಿಭಾಗದಲ್ಲಿ ಬರುವ NRDWP, ಅಂತರ್ಜಲ. ಟಾಸ್ಕಫೂರ್ಸ, ಸೆಸ್ಟನಬಿಲಿಟಿ, ಹಾಗೂ ಇತರೆ ಕುಡಿಯುವ ನೀರಿನ ಕಾಮಗಾರಿಗಳ ಕ್ರಿಯಾಯೋಜನೆ ತಯಾರಿಸುವುದು ಅಂದಾಜು ಪತ್ರಿಕೆ ತಾಂತ್ರಿಕ ಪರಿಶೀಲನೆ ಮಾಡುವುದು, ತುಂಡುಗುತ್ತಿಗೆ ಕರಾರು ಪತ್ರ ಮಂಜೂರು ಮಾಡುವುದು ಹಾಗೂ ಉಪ–ವಿಭಾಗದಿಂದ ಬರುವ ಕಾಮಗಾರಿ ಬಿಲ್ಲುಗಳ ತಪಾಸಣೆ ಹಾಗೂ ಇವುಗಳಿಗೆ ಸಂಬಂಧಪಟ್ಟ ವಹಿಗಳು, ಕಡತಗಳು ಕೆ.ಡಿ.ಪಿ ಸಭೆ ಹಾಗೂ ಪತ್ರ ವ್ಯವಹಾರಗಳ ನಿರ್ವಹಣೆ ಮಾಡುವುದು ಹಾಗೂ ಸಭೆಗಳಿಗೆ ಬೇಕಾಗುವ ನಿಮ್ಮ ಶಾಖೆಗೆ ಸಂಬಂಧಿಸಿದ ಸಭೆ ಮಾಹಿತಿಯನ್ನು ತಯಾರಿಸಿ ಕೊಡುವುದು.

**ಒಬ್ಬ ಕಿರಿಯ ಇಂಜಿನೀಯರ :–**ಎಲ್ಲಾ 6 ಉಪವಿಭಾಗದಲ್ಲಿ ಬರುವ 3054 ರಸ್ತೆ ಮತ್ತು ಸೇತುವೆ, 5054 ರಸ್ತೆ ಮತ್ತು ಸೇತುವೆ ಕಾಮಗಾರಿ, 13ನೇ ಹಣಕಾಸು ರಸ್ತೆ ಕಾಮಗಾರಿ ಹಾಗೂ ಲೋಕಸಭಾ ಸದಸ್ಯರ ಕಾಮಗಾರಿಗಳ ಕ್ರಿಯಾಯೋಜನೆ ತಯಾರಿಸುವುದು ಅಂದಾಜು ಪತ್ರಿಕೆ ತಾಂತ್ರಿಕ ಪರಿಶೀಲನೆ ಮಾಡುವುದು, ತುಂಡುಗುತ್ತಿಗೆ ಕರಾರು ಪತ್ರ ಮಂಜೂರು ಮಾಡುವುದು ಹಾಗೂ ಉಪ–ವಿಭಾಗದಿಂದ ಬರುವ ಕಾಮಗಾರಿ ಬಿಲ್ಲುಗಳ ತಪಾಸಣೆ ಹಾಗೂ ಇವುಗಳಿಗೆ ಸಂಬಂಧಪಟ್ಟ ವಹಿಗಳು, ಕಡತಗಳು ಹಾಗೂ ಪತ್ರ ವ್ಯವಹಾರಗಳ ನಿರ್ವಹಣೆ ಮಾಡುವುದು ಹಾಗೂ ಸಭೆಗಳಿಗೆ ಬೇಕಾಗುವ ನಿಮ್ಮ ಶಾಖೆಯ ಮಾಹಿತಿಯನ್ನು ತಯಾರಿಸಿ ಕೊಡುವುದು.

**ಒಬ್ಬ ಕಿರಿಯ ಇಂಜಿನೀಯರ:–** ಎಲ್ಲಾ 6 ಉಪವಿಭಾಗದಲ್ಲಿ ಬರುವ ವಿಧಾನಸಭಾ ಸದಸ್ಯರ ಅನುದಾನ(MLA),ವಿಧಾನ ಪರಿಷತ್ ಸದಸ್ಯರ ಅನುದಾನ (MLC) ಯೋಜನೆ SGSY ಕಾಮಗಾರಿಗಳ ಕ್ರಿಯಾಯೋಜನೆ ತಯಾರಿಸುವುದು ಅಂದಾಜು ಪತ್ರಿಕೆ ತಾಂತ್ರಿಕ ಪರಿಶೀಲನೆ ಮಾಡುವುದು, ತುಂಡುಗುತ್ತಿಗೆ ಕರಾರು ಪತ್ರ ಮಂಜೂರು ಮಾಡುವುದು ಹಾಗೂ ಉಪ–ವಿಭಾಗದಿಂದ ಬರುವ ಕಾಮಗಾರಿ ಬಿಲ್ಲುಗಳ ತಪಾಸಣೆ ಹಾಗೂ ಇವುಗಳಿಗೆ ಸಂಬಂಧಪಟ್ಟ ವಹಿಗಳು,ಕಡತಗಳು ಹಾಗೂ ಜಿಲ್ಲಾ ಪತ್ರ ವ್ಯವಹಾರಗಳ ನಿರ್ವಹಣೆ ಮಾಡುವುದು ಹಾಗೂ ಜಿಲ್ಲಾ ಪಂಚಾಯತ ಸಾಮಾನ್ಯ ಸಭೆ ಬೇಕಾಗುವ ನಿಮ್ಮ ಶಾಖೆಯ ಮಾಹಿತಿಯನ್ನು ತಯಾರಿಸಿ ಕೊಡುವುದು.

**ಮತ್ತೋಬ್ಬ ಕಿರಿಯ ಇಂಜಿನೀಯರ:–**ಎಲ್ಲಾ 6 ಉಪವಿಭಾಗದಲ್ಲಿ ಬರುವ , ಚಿಕ್ಕನೀರಾವರಿ, ಅತೀವೃಷ್ಠಿ, ಹಾಗೂ ಸುವರ್ಣಗ್ರಾಮ ಯೋಜನೆ ನಬಾರ್ಡ ಅಂಗನವಾಡಿಕಟ್ಟಡ ಕಾಮಗಾರಿಗಳ ಕ್ರಿಯಾಯೋಜನೆ ತಯಾರಿಸುವುದು ಅಂದಾಜು ಪತ್ರಿಕೆ ತಾಂತ್ರಿಕ ಪರಿಶೀಲನೆ ಮಾಡುವುದು, ತುಂಡುಗುತ್ತಿಗೆ ಕರಾರು ಪತ್ರ ಮಂಜೂರು ಮಾಡುವುದು ಹಾಗೂ ಉಪ–ವಿಭಾಗದಿಂದ ಬರುವ ಕಾಮಗಾರಿ ಬಿಲ್ಲುಗಳ ತಪಾಸಣೆ ಹಾಗೂ ಇವುಗಳಿಗೆ ಸಂಬಂಧಪಟ್ಟ ವಹಿಗಳು,ಕಡತಗಳು ಹಾಗೂ ಪತ್ರ ವ್ಯವಹಾರಗಳ ನಿರ್ವಹಣೆ ಮಾಡುವುದು ಹಾಗೂ ಗ್ರಾ.ಪಂ.,ತಾ.ಪಂ., ಇಲಾಖೆಗಳಿಗೆ ಸಂಬಂಧಿಸಿದ ಅಂದಾಜು ಪತ್ರಿಕೆಗಳ ತಾಂತ್ರಿಕ ಪರಿಶೀಲನೆ ಮಾಡುವುದು ಹಾಗೂ ಸಭೆಗಳಿಗೆ ಬೇಕಾಗುವ ನಿಮ್ಮ ಶಾಖೆಯ ಮಾಹಿತಿಯನ್ನು ತಯಾರಿಸಿ ಕೊಡುವುದು.

**ಒಬ್ಬ ಆಕೃತಿ ರಚನಾಕಾರರು:–** ಎಲ್ಲಾ 6 ಉಪವಿಭಾಗದಲ್ಲಿ ಬರುವ ಜಿಲ್ಲಾ Innovative ಅನುದಾನ, ಮಲೆನಾಡು ಪ್ರದೇಶಾಭಿವೃದ್ಧಿ ಯೋಜನೆ ಪ್ರವಾಸೋದ್ಯಮ ಹಾಗೂ ಇತರೆ ಇಲಾಖೆಗಳ ಕಾಮಗಾರಿಗಳ ಕ್ರಿಯಾಯೋಜನೆ ತಯಾರಿಸುವುದು ಅಂದಾಜು ಪತ್ರಿಕೆ ತಾಂತ್ರಿಕ ಪರಿಶೀಲನೆ ಮಾಡುವುದು, ತುಂಡುಗುತ್ತಿಗೆ ಕರಾರು ಪತ್ರ ಮಂಜೂರು ಮಾಡುವುದು ಹಾಗೂ ಉಪ–ವಿಭಾಗದಿಂದ ಬರುವ ಕಾಮಗಾರಿ ಬಿಲ್ಲುಗಳ ತಪಾಸಣೆ ಹಾಗೂ ಇವುಗಳಿಗೆ ಸಂಬಂಧಪಟ್ಟ ವಹಿಗಳು ,ಕಡತಗಳು ಹಾಗೂ ಪತ್ರ ವ್ಯವಹಾರಗಳ ನಿರ್ವಹಣೆ ಮಾಡುವುದು ಹಾಗೂ ಅರಣ್ಯ ಇಲಾಖೆ ಹಾಗೂಇತರೆ ಇಲಾಖೆಗಳಿಗೆ ಸಂಬಂಧಿಸಿದ ಅಂದಾಜು ಪತ್ರಿಕೆಗಳ ತಾಂತ್ರಿಕ ಪರಿಶೀಲನೆ ಮಾಡುವುದು ಹಾಗೂ ಸಭೆಗಳಿಗೆ ಬೇಕಾಗುವ ಮಾಹಿತಿಯನ್ನು ತಯಾರಿಸಿ ಕೊಡುವುದು

**ಲೆಕ್ಕ ಪತ್ರ ಶಾಖೆ :–** ಈ ಶಾಖೆಯಲ್ಲಿ ಒಬ್ಬ ಲೆಕ್ಕ ಪರಿಶೋಧನಾಧಿಕಾರಿಗಳು 2 ಜನ ಪ್ರಥಮ ದರ್ಜೆ ಲೆಕ್ಕ ಸಹಾಯಕರು 4 ಜನ ದ್ವಿತೀಯ ದರ್ಜೆ ಲೆಕ್ಕ ಸಹಾಯಕರ ಮಂಜೂರಾದ ಹುದ್ದೆ ಇರುತ್ತದೆ. ಇವುಗಳಲ್ಲಿ ದ್ವಿತೀಯ ದರ್ಜೆ ಲೆಕ್ಕ ಸಹಾಯಕರ 1 ಹುದ್ದೆ ಖಾಲಿ ಇರುತ್ತದೆ.

**ಲೆಕ್ಕ ಪರೀಶೋಧನಾಧಿಕಾರಿಗಳು** ವಿಭಾಗ ಕಚೇರಿಗೆ ಸಂಬಂಧಿಸಿದ ಕಾಮಗಾರಿಗಳ ಲೆಕ್ಕ ಪರಿಶೋಧನೆ, ಲೆಕ್ಕ ಶಾಖೆಗೆ ಇತರೇ ಸಿಬ್ಬಂದಿಗಳಿಗೆ ಮಾರ್ಗದರ್ಶನ ಹಾಗೂ ಕಾರ್ಯನಿರ್ವಾಹಕ ಇಂಜಿನೀಯರರಿಗೆ ಲೆಕ್ಕ ನಿರ್ವಹಣೆ ಹಾಗೂ ಪರಿಶೋಧನೆಗೆ ಸಂಬಂಧಿಸಿದ ಹಾಗೂ ವಿಭಾಗದ ಹಣಕಾಸಿಗೆ ಸಂಬಂಧಿಸಿದ ಸಲಹೆ ಕಾರ್ಯನಿರ್ವಹಿಸುವರು.

**ಒಬ್ಬ ಪ್ರಥಮ ದರ್ಜೆ ಲೆಕ್ಕ ಸಹಾಯಕರು** ಹಳಿಯಾಳ ಹಾಗೂ ಯಲ್ಲಾಪುರ ಉಪ–ವಿಭಾಗಕ್ಕೆ ಸಂಬಂಧಿಸಿದ ಲೆಕ್ಕ ಪರಿಶೋಧನೆ ವರ್ಕ ರಜಿಸ್ಟರ ಹಾಗೂ ಕಂಟ್ರಾಕ್ಟರ್ ರಜಿಸ್ಟರ್ ನಿರ್ವಹಣೆ, ಮಾಸಿಕ ಹಾಗೂ ವಾರ್ಷಿಕ ಲೆಕ್ಕ ಹೊಂದಾಣಿಕೆ ಇತ್ಯಾದಿ ಕೆಲಸ ನಿರ್ವಹಿಸುವರು.

**ಒಬ್ಬರು** ಸಿದ್ದಾಪುರ ಉಪ ವಿಭಾಗದ ಲೆಕ್ಕ ಪರಿಶೋಧನೆ, ವಾರ್ಷಿಕ ಲೆಕ್ಕ ಹೊಂದಾಣಿಕೆ ಕಂಟ್ರಾಕ್ಟರ್ ರಜಿಸ್ಟರ್ ನಿರ್ವಹಣೆ, ಇತ್ಯಾದಿ ಕೆಲಸ ನಿರ್ವಹಿಸುವರು.

**ಒಬ್ಬ ದ್ವಿತೀಯ ದರ್ಜೆ ಲೆಕ್ಕ ಸಹಾಯಕರವರು** ಶಿರಸಿ ಉಪ ವಿಭಾಗದ ಆಡಿಟ್ ಕೆಲಸ ಲೆಕ್ಕ ಪರಿಶೋಧನೆ ವರ್ಕ ರಜಿಸ್ಟರ ಹಾಗೂ ಕಂಟ್ರಾಕ್ಟರ್ ರಜಿಸ್ಟರ್ ನಿರ್ವಹಣೆ, ಮಾಸಿಕ ಹಾಗೂ ವಾರ್ಷಿಕ ಲೆಕ್ಕ ಹೊಂದಾಣಿಕೆ ಇತ್ಯಾದಿ ಕೆಲಸ ನಿರ್ವಹಿಸುವರು.

**ಒಬ್ಬ ದ್ವಿತೀಯ ದರ್ಜೆ ಸಹಾಯಕರು** ನಿಯೋಜನೆಯ ಮೇಲೆ ಸೇವೆ ಸಲ್ಲಿಸುತ್ತಿದ್ದು, ನಗದು ಶಾಖೆ ನಿರ್ವಹಣೆ, ಅನುದಾನ ವೆಚ್ಚದ ವಿವರ, ಲೆಕ್ಕ ಪರಿಶೀಲನೆ ನಗದು ಕ್ಯಾಶ್ ಬುಕ್ ನಿರ್ವಹಣೆಗೆ ಸಂಬಂಧಿಸಿದ ಪತ್ರ ವ್ಯವಹಾರ

**ಒಬ್ಬ ದ್ವಿತೀಯ ದರ್ಜೆ ಲೆಕ್ಕ ಸಹಾಯಕ** ಇವರು ಜೋಯಿಡಾ ಉಪ ವಿಭಾಗದ ಲೆಕ್ಕ ಪರಿಶೋಧನೆ ವರ್ಕ ರಜಿಸ್ಟರ ಹಾಗೂ ಕಂಟ್ರಾಕ್ಟರ್ ರಜಿಸ್ಟರ್ ನಿರ್ವಹಣೆ, ಮಾಸಿಕ ಹಾಗೂ ವಾರ್ಷಿಕ ಲೆಕ್ಕ ಹೊಂದಾಣಿಕೆ ಇತ್ಯಾದಿ ಕೆಲಸ ನಿರ್ವಹಿಸುವರು.

**ಒಬ್ಬ ದ್ವಿತೀಯ ದರ್ಜೆ ಲೆಕ್ಕ ಸಹಾಯಕರು** ಮುಂಡಗೋಡ ಉಪ–ವಿಭಾಗದ ಲೆಕ್ಕ ಪರಿಶೋಧನೆ ವಾಟರ ಸಪ್ಲೆ ಶೆಡ್ಯೂಲ್ ತಯಾರಿಸುವದು.ಇತ್ಯಾದಿ ಕಾರ್ಯನಿರ್ವಾಹಕ ಇಂಜಿನೀಯರರು ಮತ್ತು ಲೆಕ್ಕಪರಿಶೋಧನಾಧಿಕಾರಿಗಳ ನಿರ್ದೇಶನದಂತೆ ಕಾರ್ಯನಿರ್ವಹಿಸುವರು.

**ಉಗ್ರಾಣ ಶಾಖೆ:–** ಈ ಶಾಖೆಯಲ್ಲಿ ಒಬ್ಬ ಪ್ರಥಮ ದರ್ಜೆ ಭಂಡಾರ ಪಾಲಕರ ಹುದ್ದೆ ಮಂಜೂರಾಗಿದ್ದು ಈಗ ಖಾಲಿ ಇರುತ್ತದೆ.ನಿಯೋಜನೆಯ ಮೇಲೆ ಕಾರ್ಯನಿರ್ವಹಿಸುತ್ತಿರುವ ದ್ವಿತೀಯ ದರ್ಜೆ ಸಹಾಯಕರು ಈ ಶಾಖೆಯ ಹೆಚ್ಚುವರಿ ಕಾರ್ಯಭಾರವನ್ನು ನಿರ್ವಹಿಸುತ್ತಿದ್ದು. ವಿಭಾಗ ಕಾರ್ಯಾಲಯದ ವಾಹನ ನಿರ್ವಹಣೆ ಒಟ್ಟೂ ವಿಭಾಗಕ್ಕೆ ಸಂಬಂಧಿಸಿದ ವಾಹನಗಳಿಗೆ ಸಂಬಂಧಿಸಿದ ಪತ್ರ ವ್ಯವಹಾರ ದಾಸ್ತಾನು, ಟಿ&ಪಿ, ಫರ್ನಿಚರಗಳ ಲೆಕ್ಕ ಪತ್ರ ನಿರ್ವಹಣೆ ಹಾಗೂ ಉಗ್ರಾಣ ಶಾಖೆಗೆ ಸಂಬಂಧಿಸಿದ ಪತ್ರ ವ್ಯವಹಾರ. ನಿರ್ವಹಿಸುವರು.

**ಪ್ರಸ್ತಾವನೆ:**

ಮೇಲೆ ಓದಲಾದ (1)ರಲ್ಲಿ ಶ್ರೀಮತಿ. ಸಿ.ಪಿ.ಮಂಜುಳ, ಪ್ರಥಮ ದರ್ಜೆ ಸಹಾಯಕರು, ಇವರು ಅನುಕಂಪದ ಆಧಾರದ ಮೇಲೆ ನೇಮಕಾತಿಯಾಗಿ ದಿನಾಂಕ: 07/06/01 ರಿಂದ ಸಾರ್ವಜನಿಕ ಆಸ್ಪತ್ರೆ, ಕೆ.ಆರ್.ನಗರ, ಇಲ್ಲಿ ಸೇವೆ ಸಲ್ಲಿಸುತ್ತಿದ್ದ ಅವಧಿಯಲ್ಲಿ ದಿನಾಂಕ: 09/09/02 ರಿಂದ ದಿನಾಂಕ: 25/01/2005 ರವರೆಗೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿದ್ದು, ಈ ಬಗ್ಗೆ ವಿಚಾರಣೆ ನಡೆಸಿ ದಂಡನೆ ವಿಧಿಸಲಾಗಿರುತ್ತದೆ. ನಂತರ ಪುನಃ ದಿನಾಂಕ: 11/09/06 ರಿಂದ ಕರ್ತವ್ಯಕ್ಕೆ ಗೈರು ಹಾಜರಾಗಿದ್ದು, ನೌಕರರಿಗೆ ಕರ್ತವ್ಯಕ್ಕೆ ಹಾಜರಾಗಲು ಸೂಚಿಸಿ ಪತ್ರಗಳನ್ನು ಬರೆದಾಗ್ಯೂ ನೋಟೀಸ್ ಜಾರಿ ಮಾಡಿದಾಗ್ಯೂ ಸ್ವೀಕೃತಿಯಾಗದೇ ವಾಪಸ್ಸು ಬಂದಿರುತ್ತದೆ. ನೌಕರರ ಗೈರು ಹಾಜರಿ ಬಗ್ಗೆ ದೋಷಾರೋಪಣಾ ಪಟ್ಟಿ ಜಾರಿ ಮಾಡಿದ್ದು, ನೌಕರರು ಲಿಖಿತ ಅಹವಾಲನ್ನು ಸಲ್ಲಿಸದ ಕಾರಣ ಪತ್ರಿಕಾ ಪ್ರಕಟಣೆ ನೀಡಲಾಗಿದ್ದು, ಯಾವುದಕ್ಕೂ ಸ್ಪಂದಿಸಿರುವುದಿಲ್ಲ. ನೌಕರರ ಗೈರು ಹಾಜರಿ ಬಗ್ಗೆ ಇಲಾಖಾ ವಿಚಾರಣೆ ನಡೆಸಲಾಗಿ ನೌಕರರು ವಿಚಾರಣೆಗೂ ಹಾಜರಾಗದ ಕಾರಣ ಆರೋಪ ಸಾಬೀತಾಗಿದ್ದು, ನೌಕರರನ್ನು ಸೇವೆಯಿಂದ ವಜಾಗೊಳಿಸುವ ದಂಡನೆ ವಿಧಿಸಬೇಕೆಂದು ಶಿಫಾರಸ್ಸು ಮಾಡಿರುತ್ತಾರೆ. ಮೇಲೆ ಓದಲಾದ (2)ರಲ್ಲಿ ನೌಕರರ ಖಾಯಂ ಪೂರ್ವ ಸೇವಾವಧಿ ಘೋಷಣೆಯಾಗಿಲ್ಲದಿರುವ ಬಗ್ಗೆ ಮಾಹಿತಿ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್(5)ಸಿಆರ್-33/2010-11. ದಿನಾಂಕ: 28/07/2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಗಾಗಿ ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಡಾ॥ ಟಿ.ಎಸ್.ಚಲುವರಾಜ್, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಆದ ನಾನು ಶ್ರೀಮತಿ. ಸಿ.ಪಿ.ಮಂಜುಳ, ಪ್ರಥಮ ದರ್ಜೆ ಸಹಾಯಕರು, ಪ್ರಾಥಮಿಕ ಆರೋಗ್ಯ ಕೇಂದ್ರ, ಗಾವಡಗೆರೆ, ಹುಣಸೂರು ತಾ॥ ಮೈಸೂರು ಜಿಲ್ಲೆ. ಇವರ ಅನಧಿಕೃತ ಗೈರು ಹಾಜರಿ ಆರೋಪವನ್ನು ಗಂಬೀರವಾಗಿ ಪರಿಗಣಿಸಿ ಈ ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ಪ್ರೊಬೆಷನ್) ನಿಯಮಗಳ 1977 ರ ನಿಯಮ 6 (1) (ಬಿ) ಪ್ರಕಾರ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಿದ್ದೇನೆ.

**ನಿರ್ದೇಶಕರು,**
**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು**
**ಬೆಂಗಳೂರು.**

**ಪಿ.ಆರ್. 1056**

**ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳ ನಿರ್ದೇಶನಾಲಯ, ಬೆಂಗಳೂರು, ಇವರ ನಡವಳಿಗಳು**

**ವಿಷಯ:-** ಶ್ರೀಮತಿ. ಎಸ್.ಪ್ರೇಮ, ನೈರ್ಮಲ್ಯ ಸೇವಕಿ, ವೆನ್‌ಲಾಕ್ ಜಿಲ್ಲಾ ಆಸ್ಪತ್ರೆ, ಹಂಪನಕಟ್ಟಾ, ಮಂಗಳೂರು. ಇವರ ಅನಧಿಕೃತ ಗೈರು ಹಾಜರಿ **ಬಗ್ಗೆ ಶಿಸ್ತುಕ್ರಮ- ಅಂತಿಮ ಆದೇಶ.**

**ಓದಲಾಗಿದೆ:-**

1. ಜಿಲ್ಲಾ ಶಸ್ತ್ರ ಚಿಕಿತ್ಸಕರು ಮತ್ತು ಅಧೀಕ್ಷಕರು, ವೆನ್‌ಲಾಕ್ ಜಿಲ್ಲಾ ಆಸ್ಪತ್ರೆ, ಹಂಪನಕಟ್ಟಾ, ಮಂಗಳೂರು ಇವರ.ಪತ್ರ ಸಂ:ಸಿಎಫ್‌ಟಿ(2)12/06-07,ದಿನಾಂಕ 11/08/2010, 17/03/11, 03/08/11, 21/10/11 ಹಾಗೂ ದಿನಾಂಕ: 07/04/12.
2. ಜಿಲ್ಲಾ ಶಸ್ತ್ರ ಚಿಕಿತ್ಸಕರು ಮತ್ತು ಅಧೀಕ್ಷಕರು, ವೆನ್‌ಲಾಕ್ ಜಿಲ್ಲಾ ಆಸ್ಪತ್ರೆ, ಹಂಪನಕಟ್ಟಾ, ಮಂಗಳೂರು ಇವರ ಅ.ಜ್ಞಾ.ಪತ್ರ ಸಂ ಸಿಎಫ್‌ಟಿ (2)12/06-07, ದಿನಾಂಕ 02/12/2006, ದಿನಾಂಕ:09/05/07, 04/04/08 ಹಾಗೂ 14/11/10.
3. ಜಿಲ್ಲಾ ಶಸ್ತ್ರ ಚಿಕಿತ್ಸಕರು ಮತ್ತು ಅಧೀಕ್ಷಕರು, ವೆನ್‌ಲಾಕ್ ಜಿಲ್ಲಾ ಆಸ್ಪತ್ರೆ, ಹಂಪನಕಟ್ಟಾ, ಮಂಗಳೂರು ಇವರ ಪತ್ರಿಕಾ ಪ್ರಕಟಣೆ ದಿನಾಂಕ:16/04/09.
4. ಜಿಲ್ಲಾ ಶಸ್ತ್ರ ಚಿಕಿತ್ಸಕರು ಮತ್ತು ಅಧೀಕ್ಷಕರು, ವೆನ್‌ಲಾಕ್ ಜಿಲ್ಲಾ ಆಸ್ಪತ್ರೆ, ಹಂಪನಕಟ್ಟಾ, ಮಂಗಳೂರು ಇವರ ತಿಳುವಳಿಕೆ ಪತ್ರ ದಿನಾಂಕ:22/06/09.
5. ಜಿಲ್ಲಾ ಶಸ್ತ್ರ ಚಿಕಿತ್ಸಕರು ಮತ್ತು ಅಧೀಕ್ಷಕರು, ವೆನ್‌ಲಾಕ್ ಜಿಲ್ಲಾ ಆಸ್ಪತ್ರೆ, ಹಂಪನಕಟ್ಟಾ, ಮಂಗಳೂರು ಇವರ ವಿಚಾರಣಾ ವರದಿ ದಿನಾಂಕ: 16/06/10
6. ಜಿಲ್ಲಾ ಶಸ್ತ್ರ ಚಿಕಿತ್ಸಕರು ಮತ್ತು ಅಧೀಕ್ಷಕರು, ವೆನ್‌ಲಾಕ್ ಜಿಲ್ಲಾ ಆಸ್ಪತ್ರೆ, ಹಂಪನಕಟ್ಟಾ, ಮಂಗಳೂರು ಇವರು ಕೊನೆಯದಾಗಿ ವಿವರಣೆ/ಅಹವಾಲು ಒಪ್ಪಿಸಲು ಸೂಚಿಸಿ ಬರೆದ ಪತ್ರ ದಿನಾಂಕ: 31/05/11 ಹಾಗೂ 17/09/2011.

**ಪ್ರಸ್ತಾವನೆ:**

ಮೇಲೆ ಓದಲಾದ(1) ರಲ್ಲಿ ಶ್ರೀಮತಿ. ಎಸ್.ಪ್ರೇಮ, ನೈರ್ಮಲ್ಯ ಸೇವಕಿ, ವೆನ್‌ಲಾಕ್ ಜಿಲ್ಲಾ ಆಸ್ಪತ್ರೆ, ಹಂಪನಕಟ್ಟಾ, ಮಂಗಳೂರು ಇವರು ದಿನಾಂಕ: 20/09/06 ರಿಂದ ಇಲ್ಲಿಯವರೆಗೂ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಿ ಆದ ಬಗ್ಗೆ ಮೇಲೆ ಓದಲಾದ (2)ರಲ್ಲಿ ಕರ್ತವ್ಯಕ್ಕೆ ಹಾಜರಾಗಲು ಸೂಚಿಸಿ ಪತ್ರಗಳನ್ನು ಬರೆದಿದ್ದರೂ ಸಹ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಮೇಲೆ ಓದಲಾದ (3)ರಲ್ಲಿ ಈ ಬಗ್ಗೆ ಪತ್ರಿಕಾ ಪ್ರಕಟಣೆ ನೀಡಿದಾಗ್ಯೂ ಹಾಗೂ

ಮೇಲೆ ಓದಲಾದ (4)ರಲ್ಲಿ ತಿಳುವಳಿಕೆ ಪತ್ರ ಜಾರಿಗೊಳಿಸದಾಗ್ಯೂ ಯಾವುದಕ್ಕೂ ಸ್ಪಂದಿಸಿರುವುದಿಲ್ಲ ಮೇಲೆ ಓದಲಾದ (5)ರಲ್ಲಿ ನೌಕರರ ಗೈರು ಹಾಜರಿ ಬಗ್ಗೆ ಇಲಾಖಾ ವಿಚಾರಣೆ ನಡೆಸಲಾಗಿ, ನೌಕರರು ವಿಚಾರಣೆಗೂ ಗೈರುಹಾಜರಾಗಿದ್ದು, ನೌಕರರ ಗೈರು ಹಾಜರಿ ಆರೋಪ ಸಾಬೀತಾಗಿರುವುದಾಗಿ ವಿಚಾರಣಾ ವರದಿಯಲ್ಲಿ ತಿಳಿಸಿರುತ್ತಾರೆ. ಮೇಲೆ ಓದಲಾದ (6 )ರಲ್ಲಿ ನೌಕರರಿಗೆ ಕೊನೆಯದಾಗಿ ವಿವರಣೆ ಅಥವಾ ಅಹವಾಲು ಒಪ್ಪಿಸಲು ಸೂಚಿಸಿ ಪತ್ರ ಬರೆಯಲಾಗಿದ್ದು, ನೌಕರರು ಪತ್ರ ಸ್ವೀಕರಿಸಿದ್ದು, ಯಾವುದೇ ಅಹವಾಲು ಸಲ್ಲಿಸಿರುವುದಿಲ್ಲವೆಂದು ತಿಳಿಸುತ್ತಾ, ನೌಕರರ ಗೈರು ಹಾಜರಿ ಆರೋಪ ಸಾಬೀತಾಗಿರುವುದರಿಂದ ನೌಕರರನ್ನು ಸೇವೆಯಿಂದ ವಜಾಗೊಳಿಸುವಂತೆ ಶಿಫಾರಸ್ಸು ಮಾಡಿರುವುದನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಆದೇಶ ಸಂಖ್ಯೆ: ಡಿಪಿಎನ್(8)ಸಿಆರ್-13 / 2010-11 ದಿನಾಂಕ: 20/07/2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಗಾಗಿ ಕರ್ನಾಟಕ ನಾಗರೀಕ ಸೇವಾ(ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಡಾ॥ ಟಿ.ಎಸ್.ಚಲುವರಾಜ್, ನಿರ್ದೇಶಕರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಆದ ನಾನು ಶ್ರೀಮತಿ. ಎಸ್.ಪ್ರೇಮ, ನೈರ್ಮಲ್ಯ ಸೇವಕಿ, ವೆನ್‌ಲಾಕ್ ಜಿಲ್ಲಾ ಆಸ್ಪತ್ರೆ, ಹಂಪನಕಟ್ಟಾ, ಮಂಗಳೂರು ಇವರ ಅನಧಿಕೃತ ಗೈರು ಹಾಜರಿ ಆರೋಪವನ್ನು ಗಂಭೀರವಾಗಿ ಪರಿಗಣಿಸಿ, ಈ ತಕ್ಷಣದಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) 1957ರ ನಿಯಮ 8 (viii) ರ ಪ್ರಕಾರ ಸರ್ಕಾರಿ ಸೇವೆಗೆ ಅನರ್ಹವಾಗುವಂತೆ ವಜಾ ಮಾಡಿರುತ್ತೇನೆ.

**ನಿರ್ದೇಶಕರು,**
**ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು**
**ಬೆಂಗಳೂರು**

**ಪಿ.ಆರ್. 1011**

**ಕಾರ್ಮಿಕ ಅಧಿಕಾರಿ ಹಾಗು ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ ವಿಭಾಗ-1, ಬಳ್ಳಾರಿ**

**ಸಂ.ಕಾಅಬ-1/ಕಾನಪ/ಸಿಆರ್-124/2012/783, ದಿನಾಂಕ: 28-08-2012**

| ಅರ್ಜಿದಾರರು | | ಪ್ರತಿವಾದಿಗಳು |
|---|---|---|
| 1. ಶ್ರೀಮತಿ. ಪಿ. ಸುಲ್ತಾನ್ ಬೀ ಗಂಡ ದಿ॥. ಡಿ . ತಿಪ್ಪೇಸ್ವಾಮಿ @ ಸುಲ್ತಾನ್ ಸಾಬ್. ವಯಸ್ಸು 45 ವರ್ಷ.<br>2. ಶ್ರೀ. ಶಾಕೀರ್ ತಂದೆ ಡಿ . ತಿಪ್ಪೇಸ್ವಾಮಿ @ ಸುಲ್ತಾನ್ ಸಾಬ್. ವಯಸ್ಸು 22 ವರ್ಷ.<br>3. ಶ್ರೀ. ಶಬ್ಬೀರ್ ತಂದೆ ಡಿ . ತಿಪ್ಪೇಸ್ವಾಮಿ @ ಸುಲ್ತಾನ್ ಸಾಬ್.ವಯಸ್ಸು 19 ವರ್ಷ.<br>**ವಾಸ :** ಅಜಾದ್ ನಗರ ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ. | ವಿರುದ್ಧ | ದಿ॥ ಡಿವಿಜಿನಲ್ ಕಂಟ್ರೋಲರ್,<br>ಕರ್ನಾಟಕ ಸ್ಟೇಟ್ ರೋಡ್ ಟ್ರಾನ್ಸ್‌ಪೋರ್ಟ್ ಕಾರ್ಪೂರೇಷನ್, ಹೊಸಪೇಟೆ ಡಿವಿಜನ್, ಹೊಸಪೇಟೆ. |

**: ಪ್ರಕಟಣೆ :**

ಶ್ರೀಮತಿ. ಪಿ. ಸುಲ್ತಾನ್ ಬೀ ಇವರು ಮೃತನ ಹೆಂಡತಿಯಾಗಿದ್ದು, ಶ್ರೀ. ಶಾಕೀರ್ ಮೃತನ ಮಗನಾಗಿದ್ದು, ಕುಮಾರ. ಶಬ್ಬೀರ್, ಇವರು ಅಪ್ರಾಪ್ತ ವಯಸ್ಸಿನ ಮಗನಾಗಿದ್ದು, ಮೃತ ಡಿ . ತಿಪ್ಪೇಸ್ವಾಮಿ @ ಸುಲ್ತಾನ್ ಸಾಬ್. ಇವರು 1ನೇ ಪ್ರತಿವಾದಿಗಳ ಬಳಿ ಡ್ರೈವರ್ ಆಗಿ ಕೆಲಸ ನಿರ್ವಹಿಸುತ್ತಿದ್ದು, (ಬ್ಯಾಡ್ಜ ಸಂಖ್ಯೆ-35) ಸದರಿ ಕೆಲಸ ನಿರ್ವಹಿಸುತ್ತಿರುವಾಗ ಹೃದಯಗಾತವಾಗಿ ದಿನಾಂಕ:06-12-2011 ರಂದು ಮೃತಪಟ್ಟಿದ್ದಾನೆಂದು ತಿಳಿಸಿ ತಾವು ಮೃತನ ವಾರಸುದಾರರು ಹಾಗೂ ಅವಲಂಬಿತರೆಂದು ನಷ್ಟ ಪರಿಹಾರ ಕೋರಿ ದಾವಾ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಸಂಬಂಧವಾಗಿ ಸಾರ್ವಜನಿಕರಿಗೂ ಹಾಗೂ ಸಂಬಂಧೀಕರಿಗೂ ತಿಳಿಯಪಡಿಸುವುದೇನೆಂದರೆ ಮೃತನ ವಾರಸುದಾರರು, ಅವಲಂಬಿತರು ಎಂದು ಪರಿಗಣಿಸಬೇಕೆಂದು ಬೇರೆ ಯಾರಾದರೂ ಕೋರುವುದಾದರೆ ಅಂಥವರು ಈ ಪ್ರಕಟಣೆಯನ್ನು ಕರ್ನಾಟಕ ರಾಜ್ಯ ಸರ್ಕಾರಿ ಹೊರ ಮುದ್ರಣಾಲಯ, ಬೆಂಗಳೂರು ಹಾಗೂ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ತಿಳಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಶ್ರೀ. ಕೆ.ಬಿ.ನಾಗರಾಜ್,**
ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪ ವಿಭಾಗ-1, ಬಳ್ಳಾರಿ.

**ಪಿ.ಆರ್. 1262**

## ಕಾರ್ಮಿಕ ಅಧಿಕಾರಿ ಹಾಗು ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ ವಿಭಾಗ–1, ಬಳ್ಳಾರಿ

**ಸಂ.ಕಾಅಬ–1/ಕಾನಪ/ಸಿಆರ್–125/2012780–81, ದಿನಾಂಕ: 28–08–2012**

**ಅರ್ಜಿದಾರರು**

1. ಶ್ರೀಮತಿ. ಶೇಕ್ ಖಾಸಿಂ ಬೀ ಗಂಡ ದಿ॥. ಶೇಕ್ ಜಾಫರ್ ಸಾಬ್, ವಯಸ್ಸು 32 ವರ್ಷ.
2. ಕುಮಾರ. ಶೇಕ್ ಮೊಹಬೂಬ್ ಭಾಷ ತಂದೆ ದಿ॥. ಶೇಕ್ ಜಾಫರ್ ಸಾಬ್, ವಯಸ್ಸು 12 ವರ್ಷ.
3. ಕುಮಾರ. ಕಲೀಲ್ ತಂದೆ ದಿ॥.ಶೇಕ್ ಜಾಫರ್ ಸಾಬ್, ವಯಸ್ಸು 10 ವರ್ಷ.
4. ಶ್ರೀ. ಶೇಕ್ ಸಾಧಿಕ್ ತಂದೆ ದಿ॥. ನಬೀ ಸಾಬ್ ವಯಸ್ಸು 60 ವರ್ಷ.
5. ಶ್ರೀಮತಿ.ಸಾಜೀದ ಗಂಡ ಶ್ರೀ. ಶೇಕ್ ಸಾಧಿಕ್ ವಯಸ್ಸು 55 ವರ್ಷ,

**ವಾಸ :** ಡೋರ್ ನಂ–12/403, ಸತ್ಯನಾರಾಯಣ ಪೇಟೆ, ಗುಂತಕಲ್, (ಎ.ಪಿ) ಅನಂತಪುರಂ ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು**

1. ಶ್ರೀ. ಶರ್ಮ ಸುಂದರ ಕುಮಾರ್ ತಂದೆ ರಾಜೇಶ್ವರಿ ಕುಮಾರ್ ಶರ್ಮ, ದಿ. ಪ್ರೊಪ್ರೆಟರ್ ಮೆ॥. ವಾಲ್ ಸ್ಟೋನ್ ಸೆಕ್ಯೂರಿಟಿಸ್, ಡೋರ್ ನಂ–4/17, ವಾಡ್ ನಂ–17. ಗೊಲ್ಲ ನರಸಪ್ಪ ಕಾಲೋನಿ, ಎಸ್.ಎನ್.ಪೇಟೆ ಬಳ್ಳಾರಿ.
2. ದಿ॥ ಮ್ಯಾನೇಜರ್, ಮೆ॥ ಹೊತ್ತೂರ್ ಸ್ಟೀಲ್ಸ್, ಹಲಕುಂದಿ ಗ್ರಾಮ, ಬಳ್ಳಾರಿ ತಾಲೂಕು.

**: ಪ್ರಕಟಣೆ :**

1] ಶ್ರೀಮತಿ. ಶೇಕ್ ಖಾಸಿಂ ಬೀ ಇವರು ಮೃತನ ಹೆಂಡತಿಯಾಗಿದ್ದು, 2] ಕುಮಾರ. ಶೇಕ್ ಮೊಹಬೂಬ್ ಭಾಷ ಅಪ್ರಾಪ್ತ ವಯಸ್ಸಿನ ಮೃತನ ಮಗನಾಗಿದ್ದು, 3] ಕುಮಾರ. ಕಲೀಲ್ ಇವರು ಅಪ್ರಾಪ್ತ ವಯಸ್ಸಿನ ಮಗನಾಗಿದ್ದು, 4]ಶ್ರೀ. ಶೇಕ್ ಸಾಧಿಕ್ ತಂದೆ ದಿ॥. ನಬೀ ಸಾಬ್ ಮೃತನ ತಂದೆ ಯಾಗಿದ್ದು, 5]ಶ್ರೀಮತಿ. ಸಾಜೀದ ಗಂಡ ಶ್ರೀ. ಶೇಕ್ ಸಾಧಿಕ್ ಇವರು ಮೃತನ ತಾಯಿಯಾಗಿದ್ದು, ಮೃತನು 2ನೇ ಪ್ರತಿವಾದಿಗಳ ಬಳಿ ಸೆಕ್ಯೂರಿಟಿ ಗಾರ್ಡ್ ಆಗಿ ಕೆಲಸ ನಿರ್ವಹಿಸುತ್ತಿದ್ದು ಸದರಿ ಕೆಲಸ ನಿರ್ವಹಿಸುತ್ತಿರುವಾಗ ಅಪಘಾತವಾಗಿ ದಿನಾಂಕ: 13–02–2012 ರಂದು ಮೃತಪಟ್ಟದ್ದಾನೆಂದು ತಿಳಿಸಿ ತಾವು ಮೃತನ ವಾರಸುದಾರರು ಹಾಗೂ ಅವಲಂಬಿತರೆಂದು ನಷ್ಟ ಪರಿಹಾರ ಕೋರಿ ದಾವಾ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಈ ಸಂಬಂಧವಾಗಿ ಸಾರ್ವಜನಿಕರಿಗೂ ಹಾಗೂ ಸಂಬಂಧೀಕರಿಗೂ ತಿಳಿಯಪಡಿಸುವುದೇನೆಂದರೆ ಮೃತನ ವಾರಸುದಾರರು, ಅವಲಂಬಿತರು ಎಂದು ಪರಿಗಣಿಸಬೇಕೆಂದು ಬೇರೆ ಯಾರಾದರೂ ಕೋರುವುದಾದರೆ ಅಂಥವರು ಈ ಪ್ರಕಟಣೆಯನ್ನು ಕರ್ನಾಟಕ ರಾಜ್ಯ ಸರ್ಕಾರಿ ಹೊರ ಮುದ್ರಣಾಲಯ, ಬೆಂಗಳೂರು ಹಾಗೂ ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗೆ ತಮ್ಮ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ತಿಳಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಶ್ರೀ. ಕೆ.ಬಿ.ನಾಗರಾಜ್,**
ಕಾರ್ಮಿಕ ಅಧಿಕಾರಿ ಹಾಗೂ
ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಉಪ ವಿಭಾಗ–1, ಬಳ್ಳಾರಿ.

**ಪಿ.ಆರ್. 1263**

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ–ವಿಭಾಗ ನಂ–2, ವಿಜಾಪೂರ.

**ಸಂಖ್ಯೆ:ಕಾ.ಅ.ಬಿ–2:ಕಾ.ನ.ಪ:ಮಪ್ರ:ಎಸ್.ಆರ್.ನಂ:51/2012, ದಿನಾಂಕ : 31–8–2012**

**ಅರ್ಜಿದಾರರು**

ಶ್ರೀಮತಿ ತಾರಾಬಾಯಿ ಗಂಡ ಅನಿಲ್ ಅಹೇರ,
ಮತ್ತು ಇತರರು,ಸಾ:ಹಮಾಲ ಕಾಲನಿ ಹತ್ತಿರ,
ಸೋಲಾಪುರ ರೋಡ, ವಿಜಾಪುರ.

**ಪ್ರತಿವಾದಿಗಳು**

1) ಶ್ರೀ ಗಣೇಶ ತಂದೆ ಅನೀಲ್ ಪಾಗರ, ಸಾ:ನಾಗಾಂವ ತಾ:ಜಿ:ಧೂಳೆ.
2) ದಿ ಬ್ರ್ಯಾಂಚ್ ಮ್ಯಾನೇಜರ್, ಯುನೈಟೆಡ್ ಇಂಡಿಯಾ ಇನ್ಸುರನ್ಸ್ ಕಂ.ಲಿ., ವಿಜಾಪುರ.

::ಪ್ರಕಟಣೆ::

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ **ಶ್ರೀ ಅನೀಲ ತಂದೆ ಕೊಂಡಜಿ ಆಹೇರಿ** ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ: **16–6–2011** ರಂದು ಅಪಘಾತಕ್ಕೀಡಾಗಿ ಮೃತ ನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತ ರಾಗಿರುವದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವದೇನೆಂದರೆ, ಈ ಬಗ್ಗೆ ಏನಾದರು ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ / ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳನ್ನು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವದಿಲ್ಲ.

**ಪಿ.ಯತಿರಾಜು,**
**ಕಾರ್ಮಿಕ ಪರಿಹಾರ ಆಯುಕ್ತರು ಮತ್ತು**
**ಕಾರ್ಮಿಕ ಅಧಿಕಾರಿ, ಉಪ–ವಿಭಾಗ–2, ವಿಜಾಪೂರ.**

**ಪಿ.ಆರ್. 1250**

## ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ಉಪ–ವಿಭಾಗ ನಂ–2, ವಿಜಾಪೂರ.

**ಸಂಖ್ಯೆ:ಕಾ.ಅ.ಬಿ–2:ಕಾ.ನ.ಪ:ಮಪ್ರ:ಎಸ್.ಆರ್.ನಂ:50/2012, ದಿನಾಂಕ : 29–8–2012**

**ಅರ್ಜಿದಾರರು**

ಶ್ರೀಮತಿ ಸಾರಾಬಿ ಗಂಡ ಕಮಾಲಸಾಬ ಮೂಲಿಮನಿ,
ಮತ್ತು ಇತರರು,ಸಾ:ಸಾತಿಹಾಳ, ತಾ:ಬ.ಬಾಗೇವಾಡಿ,
ಜಿಲ್ಲಾ:ವಿಜಾಪುರ.

**ಪ್ರತಿವಾದಿಗಳು**

1) ಶ್ರೀ ಮಹೇಬೂಬ ತಂದೆ ಅಬುಬುಕರ
ಮಲಬರಿ, ಸಾ: ಖಾತು ಮಸಿದಿ ಹತ್ತಿರ,
ರಹಿಮ ನಗರ, ವಿಜಾಪುರ.
2) ದಿ ಬ್ರಾಂಚ್ ಮ್ಯಾನೇಜರ್,
ರಾಯಲ ಸುಂದರಂ ಇನ್ಸುರೆನ್ಸ್ ಕಂ.ಲಿ. ಚನ್ನೈ

::ಪ್ರಕಟಣೆ::

ಮೇಲ್ಕಾಣಿಸಿದ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಅರ್ಜಿಯೊಂದನ್ನು ಸಲ್ಲಿಸಿ **ಶ್ರೀ ಶಬೀರ ತಂದೆ ಕಮಾಲಸಾಬ ಮೂಲಿಮನಿ** ಇವರು ಪ್ರತಿವಾದಿಗಳ ಬಳಿ ಕೆಲಸ ನಿರ್ವಹಿಸುವಾಗ ಮತ್ತು ಕೆಲಸದ ಪರಿಣಾಮದಿಂದಾಗಿ ದಿನಾಂಕ: **20–08–2011** ರಂದು ಅಪಘಾತಕ್ಕೀಡಾಗಿ ಮೃತ ನಾಗಿರುತ್ತಾನೆಂದು, ಅಲ್ಲದೇ ತಾವು ಮೃತರ ಅವಲಂಬಿತ ರಾಗಿರುವದರಿಂದ ಕಾಯ್ದೆಯನ್ವಯ ತಮಗೆ ಬರಬೇಕಾದ ಪರಿಹಾರದ ಹಣವನ್ನು ಪ್ರತಿವಾದಿಗಳಿಂದ ಕೊಡಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಆದ್ದರಿಂದ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಸುವದೇನೆಂದರೆ, ಈ ಬಗ್ಗೆ ಏನಾದರು ಆಕ್ಷೇಪಣೆಗಳಿದ್ದರೆ, ಹಾಗೂ ಅರ್ಜಿದಾರರಲ್ಲದೇ ತಾವೇನಾದರೂ ಮೃತರ ನಿಜವಾದ ಅವಲಂಬಿತರು ಎಂದು ಪರಿಗಣಿಸಬೇಕೆಂದು ಕೇಳಿಕೊಳ್ಳುವದಾದರೇ, ಅಂಥವರು ಈ ಪ್ರಕಟಣೆ ಕರ್ನಾಟಕ ರಾಜ್ಯಪತ್ರದಲ್ಲಿ / ಈ ನ್ಯಾಯಾಲಯದ ಸೂಚನಾ ಫಲಕದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ತಮ್ಮ ಪರ ಆಕ್ಷೇಪಣೆಯಾಗಲೀ ಅಥವಾ ಅರ್ಜಿಯಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸಬೇಕು. ಹಾಗೂ ನಿಗದಿಪಡಿಸಿದ ಅವಧಿಯಲ್ಲಿ ಯಾರಿಂದಲೂ ಆಕ್ಷೇಪಣೆ ಮತ್ತು ಅರ್ಜಿಗಳನ್ನು ಬಾರದೇ ಇದ್ದಲ್ಲಿ ಮೇಲ್ಕಂಡ ಅರ್ಜಿದಾರರ ಕ್ಲೇಮ ಅರ್ಜಿಯ ಬಗ್ಗೆ ಮುಂದಿನ ಕ್ರಮ ಜರುಗಿಸಲಾಗುವುದು. ತದನಂತರ ಬಂದ ಅರ್ಜಿಗಳನ್ನು ಮತ್ತು ಆಕ್ಷೇಪಣೆಗಳನ್ನು ಸ್ವೀಕರಿಸಲಾಗುವದಿಲ್ಲ.

**ಪಿ.ಯತಿರಾಜು,**
**ಕಾರ್ಮಿಕ ಪರಿಹಾರ ಆಯುಕ್ತರು ಮತ್ತು**
**ಕಾರ್ಮಿಕ ಅಧಿಕಾರಿ, ಉಪ–ವಿಭಾಗ–2, ವಿಜಾಪೂರ.**

**ಪಿ.ಆರ್. 1249**

## ಪೊಲೀಸ್ ಇಲಾಖೆ

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1 ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ**

**ಸಂಖ್ಯೆ/ಸಿಬಿ/ಅಧಿ/30/ಡಿಸಿಪಿ/ಸಂ.ಪೂ/2012, ದಿನಾಂಕ: 01–09–2012**

ಬೆಂಗಳೂರು ನಗರ – ಕಬ್ಬನ್ ಪಾರ್ಕ್ ಸಂಚಾರ ಪೊಲೀಸ್ ಠಾಣೆಯ ಸರಹದ್ದಿನ ಇನ್‌ಫೆಂಟ್ರಿ ರಸ್ತೆ ಮತ್ತು ಡಾ : ಅಂಬೇಡ್ಕರ್ ರಸ್ತೆಗಳು ನಗರದ ಪ್ರಮುಖ ರಸ್ತೆಗಳಾಗಿದ್ದು ದಿನನಿತ್ಯದ 24 ಗಂಟೆಯೂ ಸಹಾ ಸಂಚಾರ ಒತ್ತಡದಿಂದ ಕೂಡಿರುತ್ತದೆ.

ಇನ್‌ಫೆಂಟ್ರಿ ರಸ್ತೆಯು ಅಂತರರಾಷ್ಟ್ರೀಯ ವಿಮಾನ ನಿಲ್ದಾಣದ ಕಡೆಯಿಂದ ನಗರದ ನಾನಾ ಭಾಗಗಳಿಗೆ ಸಂಪರ್ಕ ಕಲ್ಪಿಸುವ ರಸ್ತೆಯಾಗಿದ್ದು ರಾಜಭವನ ವೃತ್ತದ ಕಡೆಯಿಂದ ಹೆಡ್ ಕ್ವಾಟರ್‌ವೃತ್ತದ ಕಡೆಗೆ ಹೆಚ್ಚು ವಾಹನಗಳ ದಟ್ಟಣೆಯಿಂದ ಕೂಡಿರುವುದರಿಂದ ಅಂಬೇಡ್ಕರ್ ರಸ್ತೆಯಲ್ಲಿ ಪೊಲೀಸ್ ತಿಮ್ಮಯ್ಯ ವೃತ್ತದ ಕಡೆಯಿಂದ ಬರುವ ವಾಹನಗಳಿಗೆ ಕಾಫಿಬೋರ್ಡ್‌ವೃತ್ತದಲ್ಲಿ ಬಲ ತಿರುವು ನೀಡಿದಲ್ಲಿ ಹೆಚ್ಚು ಅಪಘಾತಗಳು ಸಂಭವಿಸುವುದಲ್ಲದೇ, ಸುಗಮ ಸಂಚಾರ ವ್ಯವಸ್ಥೆಗೆ ಅನಾನುಕೂಲವಾಗುವುದರಿಂದ ಸದರಿ ಕಾಫಿಬೋರ್ಡ್ ವೃತ್ತದಲ್ಲಿ ಬಲ ತಿರುವು ನಿಷೇಧಿಸಿ, ಸದರಿ ರಸ್ತೆಯ ಬಾಳೇಕುಂದ್ರಿ ವೃತ್ತದಲ್ಲಿ ಬಲ ತಿರುವು ಪಡೆದು ಕ್ವೀನ್ಸ ರಸ್ತೆಯ ಮೂಲಕ ಹೋಗಬಹುದಾಗಿರುವುದರಿಂದ ಸದರಿ ಕಾಫಿಬೋರ್ಡ್ ವೃತ್ತದ ಬಲ ತಿರುವನ್ನು ನಿಷೇಧಿಸುವುದು ಅತ್ಯವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ. 115 ಮೋಟರ್ ವಾಹನ ಕಾಯ್ದೆ 1988 ಹಾಗೂ ಕಲಂ.3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಾದ ಅಧಿಕಾರನ್ನು ಚಲಾಯಿಸಿ ಶ್ರೀ ಜ್ಯೋತಿ ಪ್ರಕಾಶ್ ಮಿರ್ಜಿ, ಐಪಿಎಸ್ ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

**" ಡಾ : ಅಂಬೇಡ್ಕರ್ ರಸ್ತೆಯಲ್ಲಿ ಪೊಲೀಸ್ ತಿಮ್ಮಯ್ಯ ವೃತ್ತದ ಕಡೆಯಿಂದ ಬರುವ ವಾಹನಗಳು ಕಾಫಿಬೋರ್ಡ್‌ವೃತ್ತದಲ್ಲಿ ಬಲ ತಿರುವು ಪಡೆಯುವುದನ್ನು ನಿಷೇಧಿಸಲಾಗಿದೆ "**

ಅಂತೆಯೇ ಆದೇಶವನ್ನು ಕಲಂ 116 ಮೋಟರ್ ವಾಹನ ಕಾಯ್ದೆ 1988 ಹಾಗೂ ಕಲಂ.4 ಕರ್ನಾಟಕ ಟ್ರಾಫೀಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧನೆಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕವನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ : 03–09–2012 ರಿಂದ ಜಾರಿಗೆ ಬರುವಂತೆ ಆದೇಶಿಸಲಾಗಿದೆ.

ಈಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ : 01–09–2012 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ಹೊರಡಿಸಿರುತ್ತೇನೆ.

**ಜ್ಯೋತಿ ಪ್ರಕಾಶ್ ಮಿರ್ಜಿ, ಐಪಿಎಸ್**
ಪೊಲೀಸ್ ಕಮೀಷನರ್,
ಬೆಂಗಳೂರು ನಗರ.

**ಪಿ.ಆರ್. 1267**

## ಪೊಲೀಸ್ ಇಲಾಖೆ

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1 ಇನ್‌ಫೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ**

**ಸಂಖ್ಯೆ/ಸಿಬಿ/ಅಧಿ/31/ಡಿಸಿಪಿ/ಸಂ.ಪೂ/2012, ದಿನಾಂಕ: 01–09–2012**

ಬೆಂಗಳೂರು ನಗರ ಕಬ್ಬನ್ ಪಾರ್ಕ್ ಸಂಚಾರ ಪೊಲೀಸ್ ಠಾಣೆಯ ಸರಹದ್ದಿನ ಆಲಿ ಆಸ್ಕರ್ ರಸ್ತೆಯಲ್ಲಿ ದಿನ ನಿತ್ಯದ 24 ಗಂಟೆಯೂ ಸಹಾ ಸಂಚಾರ ಒತ್ತಡವಿದ್ದು. ದ್ವಿಮುಖ ಸಂಚಾರ ವ್ಯವಸ್ಥೆ ಇದ್ದು ಕನ್ನಿಂಗ್ ಹ್ಯಾಂ ರಸ್ತೆಗೆ ಹೋಗುವ ಚಾಲಕ /ಸವಾರರು ಆಲಿ ಆಸ್ಕರ್ ರಸ್ತೆಯ ಮೂಲಕ ಚಾಲನೆ ಮಾಡಿಕೊಂಡು ಹೋಗುತ್ತಿರುವುದರಿಂದ ಆಲಿ ಆಸ್ಕರ ರಸ್ತೆಯೂ ಕಿರಿದಾಗಿದ್ದು ವಾಹನ ಸಂಚಾರ ದಟ್ಟಣೆಯಿಂದ ಕೂಡಿರುವುದರಿಂದ ಸಾರ್ವಜನಿಕರಿಗೆ, ನಿವಾಸಿಗಳಿಗೆ ರಸ್ತೆ ದಾಟಲು ಕಷ್ಟಕರವಾಗಿರುತ್ತದೆ.

ಆಲಿ ಆಸ್ಕರ್ ರಸ್ತೆಯು ದ್ವಿಮುಖ ಸಂಚಾರ ವ್ಯವಸ್ಥೆಯಾಗಿದ್ದು. ಕಿರಿದಾಗಿದ್ದು ರಸ್ತೆಯ ಬದಿಯಲ್ಲಿ ವಾಹನ ಚಾಲಕರು ವಾಹನಗಳನ್ನು ನಿಲ್ಲಿಸುವುದರಿಂದ ಸುಗಮ ಸಂಚಾರಕ್ಕೆ ಅಡಚಣೆಯಾಗಿದ್ದು ಸುಗಮ ಸಂಚಾರ ವ್ಯವಸ್ಥೆಗೆ ಹಾಗೂ ನಿವಾಸಿಗಳ ಅನುಕೂಲಕ್ಕಾಗಿ ಆಲಿ ಆಸ್ಕರ್ ರಸ್ತೆಯಲ್ಲಿ ರಾಜಭವನ ವೃತ್ತದಿಂದ ಎಂಬಸಿ ಅಪಾರ್ಟ್‌ಮೆಂಟ್ಸ್‌ವರೆಗೆ ರಸ್ತೆಯ ಎರಡು ಬದಿಗಳಲ್ಲಿ ಅಂದರೆ ರಸ್ತೆಯ ಪಶ್ಚಿಮ ಹಾಗೂ ಪೂರ್ವ ದಿಕ್ಕಿನ ಕಡೆ ವಾಹನಗಳ ನಿಲುಗಡೆ ನಿಷೇಧಿಸುವುದು ಅತ್ಯವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ. 115 ಮೋಟರ್ ವಾಹನ ಕಾಯ್ದೆ 1988 ಹಾಗೂ ಕಲಂ.3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನ್ನ ಅಧಿಕಾರ ವ್ಯಾಪ್ತಿಯಾದ ಅಧಿಕಾರವನ್ನು ಚಲಾಯಿಸಿ ಶ್ರೀ ಜ್ಯೋತಿ ಪ್ರಕಾಶ್ ಮಿರ್ಜಿ, ಐಪಿಎಸ್ ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಈ ಕೆಳಕಂಡ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

**ಆಲಿ ಆಸ್ಕರ್ ರಸ್ತೆಯಲ್ಲಿ ರಾಜಭವನ ವೃತ್ತದಿಂದ ಎಂಬಸ್ಸಿ ಅಪಾರ್ಟ್‌ಮೆಂಟ್ಸ್‌ವರೆಗೆ ರಸ್ತೆಯ ಎರಡು ಬದಿಗಳಲ್ಲಿ ಅಂದರೆ ಪೂರ್ವ ಮತ್ತು ಪಶ್ಚಿಮದ ಕಡೆಗೆ ಎಲ್ಲಾ ರೀತಿಯ ವಾಹನ ನಿಲುಗಡೆಯನ್ನು ನಿಷೇಧಿಸಲಾಗಿದೆ.**

ಅಂತೆಯೇ ಆದೇಶವನ್ನು ಕಲಂ 116 ಮೋಟರ್ ವಾಹನ ಕಾಯ್ದೆ 1988 ಹಾಗೂ ಕಲಂ.4 ಕರ್ನಾಟಕ ಟ್ರಾಫೀಕ್ ಕಂಟ್ರೋಲ್ ಆಕ್ಟ್ 1960ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮೇಲ್ಕಂಡ ನಿರ್ಬಂಧನೆಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕವನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 03/09/2012 ರಿಂದ ಜಾರಿಗೆ ಬರುವಂತೆ ಆದೇಶಿಸಲಾಗಿದೆ.

ಈ ಆದೇಶವನ್ನು ನಾನು ಈ ದಿನ ಅಂದರೆ ದಿನಾಂಕ: 01/09/2012 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ಹೊರಡಿಸಿರುತ್ತೇನೆ.

**ಜ್ಯೋತಿ ಪ್ರಕಾಶ್ ಮಿರ್ಜಿ, ಐಪಿಎಸ್**
ಪೊಲೀಸ್ ಕಮೀಷನರ್,
ಬೆಂಗಳೂರು ನಗರ.

**ಪಿ.ಆರ್. 1268**

## ಪೊಲೀಸ್ ಇಲಾಖೆ

### ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1 ಇನ್‌ಪೆಂಟ್ರಿ ರಸ್ತೆ, ಬೆಂಗಳೂರು ನಗರ

### ಅಧಿಸೂಚನೆ

**ಸಂಖ್ಯೆ/ಸಿಬಿ/ಅಧಿ/20/ಡಿಸಿಪಿ/ಸಂ.ಪೂ/2012, ದಿನಾಂಕ: 01–09–2012**

ಬೆಂಗಳೂರು ನಗರ – ಸದಾಶಿವನಗರ ಸಂಚಾರ ಪೊಲೀಸ್ ಠಾಣೆಯ ವ್ಯಾಪ್ತಿಗೆ ಬರುವ ಟಿ.ಚೌಡಯ್ಯ ರಸ್ತೆಯ ಬಿ.ಡಿ.ಎ. ಮೇಲು ಸೇತುವೆ ಬಳಿ ಇರುವ ಸರ್ವೀಸ್ ರಸ್ತೆಯಲ್ಲಿ ಏಕಮುಖ ಸಂಚಾರ ವ್ಯವಸ್ಥೆ ಜಾರಿಯಲ್ಲಿದ್ದು, ಸುಗಮ ಸಂಚಾರಕ್ಕೆ ಯಾವುದೇ ರೀತಿಯ ಅಡಚಣೆ ಕಂಡುಬಾರದೇ ಇರುವ ಪ್ರಯುಕ್ತ ಸದರಿ ರಸ್ತೆಯಲ್ಲಿರುವ ವಾಣಿಜ್ಯ ಕಛೇರಿಗಳು, ಹೋಟೆಲ್‌ಗಳ ಮಾಲೀಕರು ಹಾಗೂ ಸಾರ್ವಜನಿಕರ ಸತತ ಒತ್ತಡದ ಮೇರೆಗೆ ಮತ್ತು ಸಾರ್ವಜನಿಕರ ಹಿತಾಸಕ್ತಿಗನುಗುಣವಾಗಿ ಸರ್ವೀಸ್ ರಸ್ತೆಯ ಪೂರ್ವ ಭಾಗದಲ್ಲಿ ವಾಹನಗಳ ನಿಲುಗಡೆ ನಿಷೇಧವನ್ನು ಮುಂದುವರೆಸಿ, ಪಶ್ಚಿಮ ಭಾಗದಲ್ಲಿ ದ್ವಿಚಕ್ರ ಮತ್ತು ಕಾರ್‌ಗಳಿಗೆ ಸಮನಾಂತರ ವಾಹನಗಳ ನಿಲುಗಡೆಗೆ ಅವಕಾಶ ಕಲ್ಪಿಸುವುದು ಅವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ–115 ಐ.ಎಂ.ವಿ. ಕಾಯ್ದೆ, 1988 ಹಾಗೂ ಕಲಂ–3 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರ ಪ್ರಕಾರ ನನ್ನ ಅಧಿಕಾರದ ವ್ಯಾಪ್ತಿಯಲ್ಲಿರುವ ಅಧಿಕಾರವನ್ನು ಚಲಾಯಿಸಿ ಬಿ.ಜಿ.ಜ್ಯೋತಿ ಪ್ರಕಾಶ್ ಮಿರ್ಜಿ, ಐ.ಪಿ.ಎಸ್. ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಆದ ನಾನು ಈ ಕೆಳಕಂಡಂತೆ ಸಂಚಾರ ನಿರ್ಬಂಧನೆಗಳನ್ನು ಆದೇಶಿಸಿರುತ್ತೇನೆ.

**"ಟಿ.ಚೌಡಯ್ಯ ರಸ್ತೆ ಬಿ.ಡಿ.ಎ. ಮೇಲು ಸೇತುವೆ ಪಕ್ಕದಲ್ಲಿರುವ ಸರ್ವೀಸ್ ರಸ್ತೆಯ ಪಶ್ಚಿಮ ಭಾಗದಲ್ಲಿ ಹಾಲಿ ಇರುವ ವಾಹನಗಳ ನಿಲುಗಡೆ ನಿಷೇಧವನ್ನು ಮಾರ್ಪಡಿಸಿ, ಸರ್ವೀಸ್ ರಸ್ತೆಯ ಉತ್ತರ ಭಾಗದಲ್ಲಿ ಶೇಷಾದ್ರಿಪುರಂ 1ನೇ ಮುಖ್ಯರಸ್ತೆಯಿಂದ 50 ಅಡಿಗಳಷ್ಟು ಮತ್ತು ದಕ್ಷಿಣ ಭಾಗದಲ್ಲಿ ಬಿ.ಡಿ.ಎ. ಮೇಲು ಸೇತುವೆಯ ಕೆಳಭಾಗದ ರಸ್ತೆಯಿಂದ 50 ಅಡಿಗಳಷ್ಟು ದೂರ ವಾಹನಗಳ ನಿಲುಗಡೆ ನಿಷೇಧವನ್ನು ಮುಂದುವರೆಸಿ ಉಳಿದ ಜಾಗದಲ್ಲಿ ದ್ವಿಚಕ್ರ ವಾಹನಗಳಿಗೆ ಮತ್ತು ಕಾರ್‌ಗಳಿಗೆ ಸಮನಾಂತರ ನಿಲುಗಡೆಗೆ ಅವಕಾಶ ಕಲ್ಪಿಸಿ ಆದೇಶಿಸಿರುತ್ತೇನೆ."**

ಅಂತಯೇ ಕಲಂ:116 ಮೋಟಾರು ವಾಹನ ಕಾಯ್ದೆ 1988 ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಗಳನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಸಂಚಾರಿ ಪೊಲೀಸ್ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 08–09–2012 ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿನ ದಿನಾಂಕ: 01–09–2012 ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಜ್ಯೋತಿ ಪ್ರಕಾಶ್ ಮಿರ್ಜಿ, ಐಪಿಎಸ್**
ಪೊಲೀಸ್ ಕಮೀಷನರ್,
ಬೆಂಗಳೂರು ನಗರ.

**ಪಿ.ಆರ್. 1269**

## ಪೊಲೀಸ್ ಇಲಾಖೆ

**ಪೊಲೀಸ್ ಕಮೀಷನರ್‌ರವರ ಕಛೇರಿ, ನಂ.1 ಇನ್‌ಪೆಂಟ್ರಿ ರಸ್ತೆ, ಬೆಂಗಳೂರು ನಗರ**

**ಅಧಿಸೂಚನೆ**

**ಸಂಖ್ಯೆ/24/ಅಸೂ/ಅಸಿಪಿ/ಸಂ.ವಿ/2012, ದಿನಾಂಕ: 28–08–2012**

ಬೆಂಗಳೂರು ನಗರ – ಮೈಕೋ ಲೇಔಟ್ ಸಂಚಾರ ಪೊಲೀಸ್ ಠಾಣೆ ವ್ಯಾಪ್ತಿಗೆ ಬರುವ ಬಿ.ಟಿ.ಎಂ 100 ಅಡಿ ವರ್ತುಲ ರಸ್ತೆಯಲ್ಲಿ 16ನೇ ಮುಖ್ಯ ರಸ್ತೆಯ ಜಂಕ್ಷನ್‌ನಿಂದ ಕೇಂದ್ರ ರೇಷ್ಮೆ ಮಂಡಳಿ ವೃತ್ತದವರೆಗೆ ರಸ್ತೆಯ ಅಗತ್ಯವಾದ ಸಾಂಧ್ರತೆಗಿಂತ ಹೆಚ್ಚಿನ ವಾಹನಗಳು ಸಂಚರಿಸುವುದರಿಂದ ಉಂಟಾಗುತ್ತಿರುವ ಸಂಚಾರ ದಟ್ಟಣೆಯನ್ನು ನಿಯಂತ್ರಣ ಮಾಡುವ ಸಲುವಾಗಿ ಹಾಗೂ ಸಾರ್ವಜನಿಕ ವಾಹನಗಳ ಸುಗಮ ಸಂಚಾರದ ಹಿತದೃಷ್ಟಿಯಿಂದ ಬಿ.ಟಿ.ಎಂ 29ನೇ ಮೈನ್ ಜಂಕ್ಷನ್‌ನಲ್ಲಿ 16ನೇ ಮೈನ್ ಜಂಕ್ಷನ್‌ನಿಂದ ಬರುವ ವಾಹನಗಳಿಗೆ 29ನೇ ಮುಖ್ಯ ರಸ್ತೆಗೆ ಬಲ ತಿರುವು ಪಡೆಯುವುದನ್ನು ನಿಷೇಧಿಸುವುದು ಹಾಗೂ ಇನ್ನಿತರೆ ಸಂಚಾರ ಮಾರ್ಪಾಡುಗಳನ್ನು ಮಾಡುವುದು ಅವಶ್ಯಕವಾಗಿರುತ್ತದೆ.

ಆದ್ದರಿಂದ ಕಲಂ 115 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 3 ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ನನಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಬಿ.ಜಿ. ಜ್ಯೋತಿಪ್ರಕಾಶ್ ಮಿರ್ಜಿ, ಐಪಿಎಸ್, ಪೊಲೀಸ್ ಕಮೀಷನರ್, ಬೆಂಗಳೂರು ನಗರ ಆದ ನಾನು ಮೈಕೋ ಲೇಔಟ್ ಸಂಚಾರ ಪೊಲೀಸ್ ಠಾಣೆ ವ್ಯಾಪ್ತಿಯಲ್ಲಿ ಈ ಕೆಳಕಂಡಂತೆ ಸಂಚಾರ ಮಾರ್ಪಾಡುಗಳನ್ನು ಮಾಡಿ ಜಾರಿಗೆ ತರಲು ಆದೇಶಿಸಿರುತ್ತೇನೆ.

**ಬಲ ತಿರುವು ನಿಷೇಧ:** **ಬಿ.ಟಿ.ಎಂ 100 ಅಡಿ ರಸ್ತೆಯಲ್ಲಿ 16ನೇ ಮೈನ್ ಜಂಕ್ಷನ್‌ನಿಂದ ಬರುವ ವಾಹನಗಳು 29ನೇ ಮೈನ್ ಜಂಕ್ಷನ್‌ನಲ್ಲಿ, ಬಿ.ಟಿ.ಎಂ 2ನೇ ಹಂತದ ಕಡೆಗೆ (29ನೇ ಮುಖ್ಯ ರಸ್ತೆಗೆ) ಬಲ ತಿರುವು ಪಡೆಯುವುದನ್ನು ನಿಷೇಧಿಸಲಾಗಿದೆ.**

ಈ ವಾಹನಗಳು 29ನೇ ಮೈನ್ ಜಂಕ್ಷನ್‌ಗಿಂತ ಮೊದಲೇ ಅಂದರೆ 100 ಮೀಟರ್ ಹಿಂದೆಯೇ 27ನೇ ಮುಖ್ಯ ರಸ್ತೆಗೆ ಎಡ ತಿರುವು ಪಡೆದು, ಅದೇ ರಸ್ತೆಯಲ್ಲಿ ಚಲಿಸಿ, ಬಿ.ಟಿ.ಎಂ 1ನೇ ಹಂತದ 1ನೇ ಅಡ್ಡ ರಸ್ತೆಗೆ ಬಲ ತಿರುವು ಪಡೆದು, ಸದರಿ ರಸ್ತೆಯಲ್ಲಿ 100 ಮೀಟರ್ ಚಲಿಸಿ ಪುನ: ಬಲ ತಿರುವು ಪಡೆಯುವ ಮೂಲಕ 29ನೇ ಮುಖ್ಯ ರಸ್ತೆಯನ್ನು ಸೇರಲು ಅನುವು ಮಾಡಿಕೊಡಲಾಗಿದೆ.

**ವಾಹನಗಳ ನಿಲುಗಡೆ ನಿಷೇಧ :**

1. **ಬಿ.ಟಿ.ಎಂ 1ನೇ ಹಂತದ 27ನೇ ಮುಖ್ಯ ರಸ್ತೆಯಲ್ಲಿ, 100 ಅಡಿ ರಿಂಗ್ ರಸ್ತೆಯಿಂದ 1ನೇ ಅಡ್ಡ ರಸ್ತೆ ಜಂಕ್ಷನ್ ನಡುವೆ 40 ಮೀಟರ್ ಅಂತರದಲ್ಲಿ ರಸ್ತೆಯ ಎರಡೂ ಕಡೆ ಎಲ್ಲಾ ನಮೂನೆಯ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ.**

2. **ಬಿ.ಟಿ.ಎಂ 1ನೇ ಹಂತದ 1ನೇ ಅಡ್ಡ ರಸ್ತೆಯಲ್ಲಿ, 27ನೇ ಮುಖ್ಯ ರಸ್ತೆ ಜಂಕ್ಷನ್‌ನಿಂದ 29ನೇ ಮುಖ್ಯ ರಸ್ತೆ ಜಂಕ್ಷನ್ ನಡುವೆ 100 ಮೀಟರ್ ಅಂತರದಲ್ಲಿ ರಸ್ತೆಯ ಎರಡೂ ಕಡೆ ಎಲ್ಲಾ ನಮೂನೆಯ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ.**

3. **ಬಿ.ಟಿ.ಎಂ 1ನೇ ಹಂತದ 29ನೇ ಮುಖ್ಯ ರಸ್ತೆಯಲ್ಲಿ 100 ಅಡಿ ರಿಂಗ್ ರಸ್ತೆಯಿಂದ 1ನೇ ಅಡ್ಡ ರಸ್ತೆ ಜಂಕ್ಷನ್ ನಡುವೆ 40 ಮೀಟರ್ ಅಂತರದಲ್ಲಿ ರಸ್ತೆಯ ಎರಡೂ ಕಡೆ ಎಲ್ಲಾ ನಮೂನೆಯ ವಾಹನಗಳ ನಿಲುಗಡೆಯನ್ನು ನಿಷೇಧಿಸಲಾಗಿದೆ.**

ಅಂತೆಯೇ ಕಲಂ 116 ಮೋಟಾರ್ ವಾಹನ ಕಾಯ್ದೆ 1988 ಹಾಗೂ ಕಲಂ 4 ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಉಪಯೋಗಿಸಿಕೊಂಡು ಮೇಲ್ಕಂಡ ನಿರ್ಬಂಧನೆಯನ್ನು ಜಾರಿಗೊಳಿಸಲು ಬೇಕಾದ ಅಗತ್ಯ ಸೂಚನಾ ಫಲಕಗಳನ್ನು ಸೂಕ್ತ ಸ್ಥಳಗಳಲ್ಲಿ ಅಳವಡಿಸಲು ಸ್ಥಳೀಯ ಅಧಿಕಾರಿಗಳಿಗೆ ಆದೇಶಿಸಿರುತ್ತೇನೆ.

ಈ ಮೇಲ್ಕಂಡ ವ್ಯವಸ್ಥೆಯನ್ನು ದಿನಾಂಕ: 01–09–2012ರಿಂದ ಜಾರಿಗೆ ಬರುವಂತೆ ಆದೇಶಿಸಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ ಅಂದರೆ ದಿನಾಂಕ: 28–08–2012ರಂದು ನನ್ನ ಸಹಿ ಮತ್ತು ಮುದ್ರೆಯೊಂದಿಗೆ ನೀಡಿರುತ್ತೇನೆ.

**ಜ್ಯೋತಿ ಪ್ರಕಾಶ್ ಮಿರ್ಜಿ, ಐಪಿಎಸ್**
ಪೊಲೀಸ್ ಕಮೀಷನರ್,
ಬೆಂಗಳೂರು ನಗರ.

**ಪಿ.ಆರ್. 1270**

**ಸಹಕಾರ ಇಲಾಖೆ**

**ಸಹಕಾರ ಸಂಘಗಳ ಸಹಾಯಕ ನಿಬಂಧಕರ ಕಛೇರಿ, ಕೇಂದ್ರ ವಲಯ ವೃತ್ತ, ನಂ.146, 3ನೇ ಮುಖ್ಯರಸ್ತೆ, 8ನೇ ಕ್ರಾಸ್, ಮಾರ್ಗೋಸ ರಸ್ತೆ, ಮಲ್ಲೇಶ್ವರಂ ಸಹಕಾರ ಸಂಘದ ಕಟ್ಟಡ, ಮಲ್ಲೇಶ್ವರಂ, ಬೆಂಗಳೂರು-03.**

**ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ರ ಕಲಂ 101(ಬಿ) ಮತ್ತು ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 38ಎ (8) (ಬಿ) ಮೇರೆಗೆ ನೀಡಲಾದ ಮಾರಾಟ ಮಾಡಲಾಗದ ಆಸ್ತಿಯ ವರ್ಗಾವಣೆ ಪ್ರಮಾಣ ಪತ್ರ**

**ವಿಷಯ:** ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿ., ಬೆಂಗಳೂರು ಇದರ ಅಮಲ್ಜಾರಿ ಸಂಖ್ಯೆ: ಎಆರ್‌ಬಿ-II(45)/ಸಿಇಪಿ/526/2009-10, ಶ್ರೀ ಎಲ್.ಸಿ ಚಿಕ್ಕಬೀರಯ್ಯ ರವರು ಸ್ಥಿರಾಸ್ತಿ ಸಂಖ್ಯೆ:28/2, ಪಿಐಡಿ-34-20-28/1, ಎ.ಕೆ. ಕಾಲೋನಿ, ಹೊಸಹಳ್ಳಿ, ವಿಜಯನಗರ, ಬಿ.ಬಿ.ಎಂ.ಪಿ. ವಿಭಾಗ, ನಂ.21, ವಾರ್ಡ್ ನಂ. 34, ಬೆಂಗಳೂರು ಈ ಸ್ಥಿರಾಸ್ತಿಯನ್ನು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 101-ಬಿ ಪ್ರಕಾರ ಬ್ಯಾಂಕಿನ ಹೆಸರಿಗೆ ಸ್ವೀಕರಿಸಿರುವ ಬಗ್ಗೆ

**ಉಲ್ಲೇಖ:**
1. ಹಿಂದಿನ ವ್ಯಾಜ್ಯ ಸಂಖ್ಯೆ: ಎ/(ಐ&ಎಂ)ಡಿಸ್/ಡಿ2/115/2008-09 ಹಾಲಿ ವ್ಯಾಜ್ಯ ಸಂಖ್ಯೆ: ಜೆಆರ್‌ಡಿ/ಯುಬಿಎಫ್/ಟಿ3581/2008-09
2. ಅಮಲ್ಜಾರಿ ಸಂಖ್ಯೆ: ಸಂಖ್ಯೆ:ಎಆರ್‌ಬಿ-II(45)/ಸಿಇಪಿ/526/ 2009-10 ದಿನಾಂಕ: 25-06-2009
3. ಮಾರಾಟಾಧಿಕಾರಿಯವರ ವರದಿ ದಿನಾಂಕ: 01-06-2011

**ಡಿಕ್ರಿ ಹೋಲ್ಡರ್**

ಕಾರ್ಯದರ್ಶಿ
ಕರ್ನಾಟಕ ಸ್ಟೇಟ್ ಅಪೆಕ್ಸ್ ಬ್ಯಾಂಕ್ ನಿಯಮಿತ
ಚಾಮರಾಜಪೇಟೆ, ಬೆಂಗಳೂರು-560 018

**ತೀರ್ಪು ಸಾಲಗಾರರು**

1. ಶ್ರೀ ಎಲ್.ಸಿ.ಚಿಕ್ಕಬೀರಯ್ಯ
ನಂ.16, 3ನೇ ಕ್ರಾಸ್, 80 ಅಡಿ ರಸ್ತೆ, ಮಾರುತಿನಗರ
ನಾಗರಭಾವಿ, ಬೆಂಗಳೂರು-72
2. ಶ್ರೀ ಸುನಿಲ್ ಕುಮಾರ್
ನಂ.893, ನಂ.4, 10ನೇ 'ಬಿ' ಕ್ರಾಸ್, ಚಂದ್ರಾ ಲೇಔಟ್
ಬೆಂಗಳೂರು-560 040.

**ಪ್ರಸ್ತಾವನೆ :**

ಶ್ರೀ ಎಲ್.ಸಿ ಚಿಕ್ಕಬೀರಯ್ಯ ರವರು ಸ್ಥಿರಾಸ್ತಿ ಸಂಖ್ಯೆ:28/1, ಪಿಐಡಿ-34-20-28/1, ಎ.ಕೆ. ಕಾಲೋನಿ ಹೊಸಹಳ್ಳಿ, ವಿಜಯನಗರ, ಬಿ.ಬಿ.ಎಂ.ಪಿ. ವಿಭಾಗ 21, ಬಿ. ವಾರ್ಡ್ ನಂ. 34, ಬೆಂಗಳೂರು ಈ ಸ್ವತ್ತನ್ನು ಆಧಾರ ಮಾಡಿ ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿ., ಚಾಮರಾಜಪೇಟೆ, ಬೆಂಗಳೂರು ಇಲ್ಲಿ ರೂ. 19,00,000/- (ಹತ್ತೊಂಬತ್ತು ಲಕ್ಷ ರೂಪಾಯಿ) ಗಳನ್ನು ಸಾಲವಾಗಿ ಪಡೆದು ಸಕಾಲದಲ್ಲಿ ಮರುಪಾವತಿ ಮಾಡದೆ ಸುಸ್ತಿದಾರರಾದ್ದರಿಂದ ಸದರಿಯವರ ಮೇಲೆ ಬ್ಯಾಂಕಿನ ವತಿಯಿಂದ ಮೇಲ್ಕಂಡಂತೆ ದಾವಾ ಹೂಡಿ ಡಿಕ್ರಿ ಆದೇಶವನ್ನು ಪಡೆದಿರುತ್ತಾರೆ. ಡಿಕ್ರಿ ಆದೇಶದನ್ವಯ ಡಿಕ್ರಿ ಹೋಲ್ಡರ್ ಬ್ಯಾಂಕ್ ಅಮಲ್ಜಾರಿ ಅರ್ಜಿಯನ್ನು ಈ ಕಛೇರಿಯಲ್ಲಿ ದಾಖಲು ಮಾಡಿರುತ್ತಾರೆ. ಅಮಲ್ಜಾರಿ ಅರ್ಜಿ ಸಂಖ್ಯೆ: ಸಂಖ್ಯೆ:ಎಆರ್‌ಬಿ-II(45)/ಸಿಇಪಿ/526/2009-10 ದಿನಾಂಕ: 25-06-2009 ಈ ಆದೇಶದನ್ವಯ ಅಮಲ್ಜಾರಿ ಕ್ರಮ ಕೈಗೊಂಡು ಸುಸ್ತಿದಾರರಾದ ಶ್ರೀ ಎಲ್.ಸಿ. ಚಿಕ್ಕಬೀರಯ್ಯ ರವರಿಗೆ ಡಿಮ್ಯಾಂಡ್ ನೋಟೀಸ್‌ನ್ನು ನೋಂದಣಿ ಅಂಚೆ ಮೂಲಕ ಜಾರಿ ಮಾಡಿದ್ದು, ಸದರಿ ನೋಟೀಸು ಜಾರಿಯಾಗದ ಕಾರಣ ಸಾಲಗಾರರು ಬ್ಯಾಂಕಿಗೆ ಅಡಮಾನ ಮಾಡಲಾಗಿದ್ದ ಸ್ಥಿರಾಸ್ತಿಯ ಗೋಡೆಯ ಮೇಲೆ ನೋಟೀಸನ್ನು ಚುಟಕಾಯಿಸಿ ಮತ್ತು ಜಾಮೀನುದಾರರಾದ ಶ್ರೀ ಸುನೀಲ್ ಕುಮಾರ್ ರವರಿಗೂ ಡಿಮ್ಯಾಂಡ್ ನೋಟೀಸನ್ನು ಸಹಿ ಪಡೆದು ಜಾರಿ ಮಾಡಿದ್ದು, ನಂತರ ದಿನಾಂಕ:07-01-2011 ರಂದು ಫಾರಂ 6 ನ್ನು ಆಸ್ತಿಯ ಗೋಡೆಯ ಮೇಲೆ ಸಾಕ್ಷಿಯ ಸಮೇತ ಚುಟಕಾಯಿಸಿ ಹಾಗೂ ನೋಂದಣಿ ಅಂಚೆ ಮೂಲಕ ಸಹ ಜಾರಿ ಮಾಡಿದ್ದು, ದಿನಾಂಕ: 26-06-2010 ರಂದು ಹರಾಜು ನಿಗಧಿಪಡಿಸಿದ್ದು, ಅದಕ್ಕೆ ಸಂಬಂಧಪಟ್ಟ ಫಾರಂ 8 ಮತ್ತು 9 ನ್ನು ಅವರು ಅಡಮಾನ ಮಾಡಿರುವ ಸ್ಥಿರಾಸ್ತಿಯ ಗೋಡೆಯ ಮೇಲೆ ಅಂಟಿಸಿ ದಿನಾಂಕ:24-05-2010 ರಂದು ಜಾರಿಗೊಳಿಸಲಾಗಿರುತ್ತದೆ ಹಾಗೂ ದಿನಾಂಕ:10-05-2010 ರಂದು ನೋಂದಣಿ ಅಂಚೆ ಮೂಲಕ ಜಾರಿಗೊಳಿಸಲಾಗಿರುತ್ತದೆ. ದಿನಾಂಕ:26-06-2010 ರ ಬಹಿರಂಗ ಹರಾಜು ಪ್ರಕ್ರಿಯೆಗೆ ಯಾವ ಬಿಡ್ಡುದಾರರು ಭಾಗವಹಿಸದ ಕಾರಣ ಹರಾಜು ಪ್ರಕ್ರಿಯೆಯನ್ನು ಮಾರಾಟಾಧಿಕಾರಿಗಳ ನಿಯಮಾನುಸಾರ 07 ದಿನಗಳಿಗೆ ಅಂದರೆ ದಿನಾಂಕ: 03-07-2010 ಕ್ಕೆ ಮುಂದೂಡಲಾಯಿತು. ಅದರಂತೆ ದಿನಾಂಕ: 03-07-2010 ರಂದು 2ನೇ ಬಾರಿ ನಡೆದ ಬಹಿರಂಗ ಹರಾಜು ಪ್ರಕ್ರಿಯೆಗೂ ಸಹ ಯಾವ ಬಿಡ್ಡುದಾರರು ಭಾಗವಹಿಸಿದ್ದರಿಂದ ಅಂತಿಮವಾಗಿ ದಿನಾಂಕ:20-10-2010 ರಂದು ನಡೆದ ಹರಾಜಿನಲ್ಲಿ ಸಹ ಯಾವ ಬಿಡ್ಡುದಾರರು ಭಾಗವಹಿಸದ ಕಾರಣ ದಿನಾಂಕ: 31-01-2011 ರಂದು ನಡೆದ ಬ್ಯಾಂಕಿನ ಆಡಳಿತ ಮಂಡಳಿ ತೀರ್ಮಾನದಂತೆ ಸದರಿ ಆಸ್ತಿಯನ್ನು ಬ್ಯಾಂಕಿನ ಹೆಸರಿಗೆ ವರ್ಗಾಯಿಸಿಕೊಳ್ಳಲು ಆಡಳಿತ ಮಂಡಳಿಯವರು ಒಪ್ಪಿಗೆ ಕೊಟ್ಟಿರುತ್ತಾರೆ. ಇದರ ಬಗ್ಗೆ ಬ್ಯಾಂಕಿನ ಕಾರ್ಯದರ್ಶಿಯವರು ಮಾರಾಟಾಧಿಕಾರಿಯವರಿಗೆ ಪತ್ರ ಮುಖೇನ ತಿಳಿಸಿದ್ದು, ಇದರ ಅನ್ವಯ ದಿನಾಂಕ:

01–06–2011 ರಂದು ಮಾರಾಟಾಧಿಕಾರಿಯವರು ವರದಿ ನೀಡಿದ್ದು, ಸದರಿ ಆಸ್ತಿಯನ್ನು ಬ್ಯಾಂಕಿನ ಹೆಸರಿಗೆ ವರ್ಗಾವಣೆ ಮಾಡುವಂತೆ ಕೇಳಿಕೊಂಡಿರುತ್ತಾರೆ. ಬ್ಯಾಂಕಿನ ಕಾರ್ಯದರ್ಶಿಯವರ ಮನವಿ ಹಾಗೂ ಮಾರಾಟಾಧಿಕಾರಿಗಳ ನಡವಳಿ ಪುರಸ್ಕರಿಸಿ ಸಾಲಗಾರರಾದ ಶ್ರೀ ಎಲ್.ಸಿ.ಚಿಕ್ಕಬೀರಯ್ಯ ರವರಿಗೆ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960 ನಿಯಮ 38ಎ(3) ರನ್ವಯ ಈ ಕಛೇರಿಯಿಂದ ಸಂಖ್ಯೆ: ಎಆರ್‌ಬಿ–45/ಅವನೋ/ದಾವಾ/37/2011–12 ದಿನಾಂಕ 19–01–2012 ರಂದು ಈ ನೋಟೀಸಿನ ದಿನಾಂಕದಿಂದ ಒಂದು ತಿಂಗಳ ಒಳಗಾಗಿ ಬ್ಯಾಂಕಿಗೆ ಬಾಕಿಯಿರುವ ಸಾಲವನ್ನು ಸಂಪೂರ್ಣವಾಗಿ ತೀರುವಳಿ ಮಾಡಲು ತಪ್ಪಿದಲ್ಲಿ ಮಾಡುವ ಆದೇಶದನ್ವಯ ಬ್ಯಾಂಕಿಗೆ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 101(ಬಿ) ಮತ್ತು ನಿಯಮ 38(ಎ) ಅನ್ವಯ ಮಾರಾಟವಾಗದ ಆಸ್ತಿಯನ್ನು ವರ್ಗಾವಣೆ ಮಾಡಲಾಗುವುದೆಂದು ತಿಳಿಸಿರುವ ನೋಟೀಸನ್ನು ಜಾರಿ ಮಾಡಲಾಗಿದ್ದ, ನೋಟೀಸು 'Address left' ಎಂಬ ಷರಾದೊಂದಿಗೆ ವಾಪಸ್ಸು ಬಂದಿರುತ್ತದೆ. ಆದ ಕಾರಣ ಸಂಖ್ಯೆ: ಎಆರ್‌ಬಿ–45/ಅವನೋ/ದಾವಾ/37/2011–12 ದಿನಾಂಕ: 15–02–2012ರ ನೋಟೀಸನ್ನು ದಿನಾಂಕ: 03–03–2012 ರ ಸಂಯುಕ್ತ ಕರ್ನಾಟಕ ದಿನ ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ ಹಾಗೂ ಸದರಿ ಬ್ಯಾಂಕಿನ ಮಾರಾಟಾಧಿಕಾರಿಯವರು ಸ್ಥಿರಾಸ್ತಿ ಇರುವ ಸ್ಥಳಕ್ಕೆ ದಿನಾಂಕ: 06–03–2012 ರಂದು ಖುದ್ದು ಭೇಟಿ ನೀಡಿ ದಿನಾಂಕ: 15–02–2012 ರ ನೋಟೀಸನ್ನು ಸದರಿ ಸ್ಥಿರಾಸ್ತಿಯ ಗೋಡೆಗೆ ಅಂಟಿಸಿ ಮಹಜರ್ ಮಾಡಿ ವರದಿ ಸಲ್ಲಿಸಿರುತ್ತಾರೆ. ಈ ಸಂಬಂಧ ತೆಗೆದ ಛಾಯಾ ಚಿತ್ರಗಳನ್ನು ಈ ಕಛೇರಿಗೆ ಸಲ್ಲಿಸಿರುತ್ತಾರೆ.

ಈ ಕಛೇರಿಯಿಂದ ನೀಡಲಾದ ನೋಟೀಸಿನನ್ವಯ ಯಾವುದೇ ಮೊಬಲಗನ್ನು ಡಿಕ್ರಿದಾರ ಬ್ಯಾಂಕಿಗೆ ಸಂದಾಯ ಮಾಡದೆ ವಿಫಲರಾಗಿರುವ ಹಿನ್ನಲೆಯಲ್ಲಿ ಬಹಿರಂಗ ಹರಾಜಿಗೆ ಒಳಪಡಿಸಲಾಗಿದ್ದ ಆಸ್ತಿಯನ್ನು ಡಿಕ್ರಿದಾರ ಬ್ಯಾಂಕಿಗೆ ವರ್ಗಾಯಿಸುವುದು ಸೂಕ್ತ ಹಾಗೂ ಸಮರ್ಪಕವಾಗಿರುವುದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

**ಸಂಖ್ಯೆ:ಎಆರ್‌ಬಿ–II(45)/ಸಿಇಪಿ/526/2009–10**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ ಡಾ॥ ಸುರೇಶಗೌಡ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಕೇಂದ್ರ ವಲಯ ವೃತ್ತ, ಬೆಂಗಳೂರು ನಗರ ಜಿಲ್ಲೆ, ಬೆಂಗಳೂರು ಹಾಗೂ ವಸೂಲಾಧಿಕಾರಿಗಳು ಆದ ನಾನು ಕರ್ನಾಟಕ ಸಹಕಾರ ಸಂಘಗಳ ನಿಯಮಾವಳಿ 1960 ರ ನಿಯಮ 38(ಎ)(5) ರನ್ವಯ ನನಗೆ ದತ್ತವಾಗಿರುವ ಅಧಿಕಾರವನ್ನು ಉಪಯೋಗಿಸಿ ಅಮಲ್ಜಾರಿ ಸಂಖ್ಯೆ ಸಂಖ್ಯೆ:ಎಆರ್‌ಬಿ–II(45)/ಸಿಇಪಿ/526/ 2009–10, ರಂತೆ ಶ್ರೀ ಎಲ್.ಸಿ ಚಿಕ್ಕಬೀರಯ್ಯ ರವರ ಆಸ್ತಿ ಸಂಖ್ಯೆ:28/1, ಪಿಐಡಿ–34–20–28/1, ಎ.ಕೆ. ಕಾಲೋನಿ, ಹೊಸಹಳ್ಳಿ, ವಿಜಯನಗರ, ಬಿ.ಬಿಎಂ.ಪಿ. ವಿಭಾಗ.21, ವಾರ್ಡ್ ನಂ. 34, ಬೆಂಗಳೂರು ಇದನ್ನು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿ., ಚಾಮರಾಜಪೇಟೆ, ಬೆಂಗಳೂರು ಇವರ ಹೆಸರಿಗೆ ವರ್ಗಾವಣೆಯನ್ನು ಈ ಕೆಳಕಂಡ ಷರತ್ತುಗಳೊಂದಿಗೆ ಮಾಡಲಾಗಿಯೆಂದು ಸ್ಥಿರೀಕರಿಸಿರುತ್ತೇನೆ ಹಾಗೂ ನಮೂನೆ 8ನ್ನು ಈ ಆದೇಶದೊಂದಿಗೆ ಲಗತ್ತಿಸಿದೆ.

**ಷೆಡ್ಯೂಲ್ ಆಸ್ತಿಯ ವಿವರ**

ಮುನಿಸಿಪಲ್ ನಂ. 28/1, ಪಿಐಡಿ ನಂ.34–20–28/1, ಎಕೆ ಕಾಲೋನಿ, ಹೊಸಹಳ್ಳಿ, ವಿಜಯನಗರ, ಬಿ.ಎಂಪಿ, ನಂ.21, ಬಿ.ಎಂ.ಪಿ ವಾರ್ಡ್ ನಂ.34, ಬೆಂಗಳೂರು ಪೂರ್ವ ಪಶ್ಚಿಮ 18 ಅಡಿಗಳು, ಉತ್ತರ–ದಕ್ಷಿಣ 48 ಅಡಿಗಳು

**ಚೆಕ್ಕುಬಂದಿ:**

ಪೂರ್ವ : ನಂ.37ನೇ ಸ್ವತ್ತು

ಪಶ್ಚಿಮ : ನಂ.37ನೇ ಸ್ವತ್ತಿನ ಉಳಿದ ಭಾಗ

ಉತ್ತರ : 20 ಅಡಿ ರಸ್ತೆ

ದಕ್ಷಿಣ : ಕನ್‌ಸರ್ವೆನ್ಸಿ

**ಆಸ್ತಿಯ ವರ್ಗಾವಣೆಯ ಷರತ್ತುಗಳು**

1. ತೀರ್ಪು ಸಾಲಗಾರರು (ಜಡ್ಜ್‌ಮೆಂಟ್ ಡೆಟಾರುದಾರರು) ಬ್ಯಾಂಕಿಗೆ ಸಂದಾಯ ಮಾಡಬೇಕಾದ ಬಾಕಿ ಹಣ ಮತ್ತು ಬಡ್ಡಿ ಹಾಗೂ ಇತರೆ ಖರ್ಚುಗಳನ್ನು 6 ತಿಂಗಳ ಅವಧಿಗೊಳಗೆ ಪಾವತಿಸಿದಲ್ಲಿ ವರ್ಗಾವಣೆ ಮಾಡಲಾದ ಆಸ್ತಿಯನ್ನು ತೀರ್ಪು ಸಾಲಗಾರರಿಗೆ ಬಿಟ್ಟುಕೊಡುವುದು.

2. ತೀರ್ಪು ಸಾಲಗಾರರು ಸಂದಾಯ ಮಾಡಬೇಕಾದ ಬಾಕಿ ಹಣವನ್ನು ಮರುಪಾವತಿಸಲು ವಿಫಲರಾದಲ್ಲಿ ವರ್ಗಾವಣೆ ಮಾಡಲಾದ ಆಸ್ತಿಯನ್ನು ಡಿಕ್ರಿದಾರ ಬ್ಯಾಂಕಿನವರು ಈ ಕಛೇರಿಯಿಂದ ಅನುಮತಿ ಪಡೆದು ಬಹಿರಂಗ ಹರಾಜು ಮಾರಾಟ ಮಾಡತಕ್ಕದ್ದು. ಈ ಮಾರಾಟದಲ್ಲಿ ಸ್ವತ್ತಿನ ಮೂಲ ಒಡೆತನ ಹೊಂದಿದ ತೀರ್ಪು ಸಾಲಗಾರರಿಗೆ (ಜಡ್ಜ್‌ಮೆಂಟ್‌ದಾರರಿಗೆ) ಯಾವಾಗಲೂ ಮೊದಲ ಆದ್ಯತೆ ನೀಡತಕ್ಕದ್ದು. ಸದರಿ ಮಾರಾಟವು ನಿಬಂಧಕರ ಸ್ಥಿರೀಕರಣಕ್ಕೆ ಒಳಪಟ್ಟಿರತಕ್ಕದ್ದು.

3. ವರ್ಗಾವಣೆಯಾದ ಆಸ್ತಿಯನ್ನು ಬ್ಯಾಂಕ್ ತನ್ನ ಹೆಸರಿಗೆ ದಾಖಲೆಗಳನ್ನು ಸಂಬಂಧಪಟ್ಟ ಪ್ರಾಧಿಕಾರಕ್ಕೆ ಸಲ್ಲಿಸಿ ಹಕ್ಕನ್ನು ವರ್ಗಾಯಿಸಿಕೊಳ್ಳಲು ಕ್ರಮವಿಡತಕ್ಕದ್ದು.
4. ಡಿಕ್ರಿದಾರ ಬ್ಯಾಂಕ್ ನಿಯಮ 38ಎ(5) ರ ಮೇರೆಗೆ ತನಗೆ ವರ್ಗಾವಣೆಯಾದ ಈ ಸ್ವತ್ತನ್ನು ತನ್ನ ವಶಕ್ಕೆ ಪಡೆದು, ಈ ಆಸ್ತಿ ಸಂಬಂಧ, ಎಲ್ಲಾ ವೆಚ್ಚಗಳ ವಿವರಗಳನ್ನು ಪ್ರತ್ಯೇಕವಾಗಿ ನಿರ್ವಹಿಸತಕ್ಕದ್ದು. ಭೂ ಕಂದಾಯ ಮತ್ತು ಇತರೆ ಬಾಕಿಗಳು ಮತ್ತು ಈ ಸ್ವತ್ತಿನಿಂದ ಸ್ವೀಕೃತವಾದ ಎಲ್ಲಾ ಆದಾಯಗಳನ್ನು ತೋರಿಸುವ ಪ್ರತ್ಯೇಕ ಲೆಕ್ಕಪತ್ರಗಳನ್ನು ಇಟ್ಟಿರತಕ್ಕದ್ದು.
5. ಈ ಆಸ್ತಿಯನ್ನು ಮಾರಾಟ ಮಾಡುವವರೆಗೆ ಹೆಚ್ಚಿನ ಉತ್ಪನ್ನ ಬರುವ ರೀತ್ಯಾ ಉಪಯೋಗಿಸತಕ್ಕದ್ದು.
6. ವಾದಿ ಬ್ಯಾಂಕಿನವರು ಒಂದು ವರ್ಷದೊಳಗಾಗಿ ಸದರಿ ಆಸ್ತಿಯನ್ನು ಬಹಿರಂಗ ಹರಾಜು ಮೂಲಕ ಮಾರಾಟ ಮಾಡತಕ್ಕದ್ದು.
7. ಅಂಗೀಕೃತ ಮೌಲ್ಯಮಾಪಕರಿಂದ ಆಸ್ತಿಯ ಮೌಲ್ಯವನ್ನು ನಿಗದಿಪಡಿಸಿ, ಸಾಲದ ಮೊಬಲಗು ಪೂರ್ತಿಯಾಗಿ ಚುಕ್ತವಾದ ನಂತರ ಉಳಿಕೆ ಮೊತ್ತವನ್ನು ಸಾಲಗಾರರಿಗೆ ಹಿಂದಿರುಗಿಸತಕ್ಕದು.

**ಡಾ|| ಸುರೇಶಗೌಡ,**
ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಹಾಗೂ ವಸೂಲಾಧಿಕಾರಿಗಳು, ಕೇಂದ್ರ ವಲಯ ವೃತ್ತ
ನಂ.146, 3ನೇ ಮುಖ್ಯರಸ್ತೆ, 8ನೇ ಅಡ್ಡರಸ್ತೆ, ಮಾರ್ಗೋಸ ರಸ್ತೆ,
ಮಲ್ಲೇಶ್ವರಂ ಸಹಕಾರ ಸಂಘದ ಕಟ್ಟಡ, ಮಲ್ಲೇಶ್ವರಂ, ಬೆಂಗಳೂರು–560003

**ಫಾರಂ–8**

**ನಿಯಮ 38(ಎ)**

**(ಆದೇಶ ಸಂಖ್ಯೆ ಎಆರ್‌ಬಿII(45)/ಸಿಇಪಿ/526/2009–10 ದಿನಾಂಕ 25–06–2009ಕ್ಕೆ ಅನುಬಂಧ)**

**ಕಲಂ 101ಬಿ ಅನ್ವಯ ಸ್ಥಿರಾಸ್ತಿಯನ್ನು ವರ್ಗಾವಣೆ ಮಾಡುವ ದೃಢೀಕರಣ ಪತ್ರ**

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 70 ರಡಿ ಎ(ಐ&ಎಂ)ಡಿಐಎಸ್/ ಡಿ2/115/2008–09 ಹಾಲಿ ವ್ಯಾಜ್ಯ ಸಂಖ್ಯೆ: ಜೆಆರ್‌ಡಿ/ಯುಬಿಎಫ್/ಟಿ–3581/2008–09, ದಿನಾಂಕ 20–04–2009 ರಲ್ಲಿ ಪಡೆದ ಅವಾರ್ಡ್‌ನ್ನು ಅಮಲ್ಜಾರಿಗೊಳಿಸಿ 26–06–2010, 03–07–2010 & 20–10–2010 ರಂದು ಸತತವಾಗಿ 3 ಭಾರಿ ಬಹಿರಂಗ ಹರಾಜು ನಿಗಧಿ ಪಡಿಸಲಾಗಿದ್ದು, ಸದರಿ ದಿನಾಂಕಗಳಂದು ನಡೆಸಿದ ಬಹಿರಂಗ ಹರಾಜಿನಲ್ಲಿ ಬಿಡ್ದುದಾರರು ಭಾಗವಹಿಸದ ಕಾರಣ ದಿನಾಂಕ: 30–01–2011 ರಂದು ಬ್ಯಾಂಕಿನ ಆಡಳಿತ ಮಂಡಳಿ ಸಭೆಯಲ್ಲಿ ತೆಗೆದುಕೊಂಡ ನಿರ್ಣಯಗಳಿಗೆ ಅನುಗುಣವಾಗಿ ಮತ್ತು ಸದರಿ ಸ್ಥಿರಾಸ್ತಿಯನ್ನು ಮಾರಾಟ ಮಾಡಲು ಸಾಧ್ಯವಾಗಿರುವುದಿಲ್ಲವೆಂದು ದೃಢಪಡಿಸಿಕೊಳ್ಳಲಾಗಿದೆ.

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 101ಬಿ ರನ್ವಯ ದಾವೆಯಲ್ಲಿನ ಜಡ್ಜ್‌ಮೆಂಟ್ ಡೆಟಾರ್‌ನ ಸದರಿ ಆಸ್ತಿಯಲ್ಲಿನ ಹಕ್ಕು ಬಾಧ್ಯತೆಗಳು ಬ್ಯಾಂಕಿನ ಹೆಸರಿಗೆ ನಿಹಿತಗೊಂಡಿರುತ್ತದೆ ಮತ್ತು ಆಸ್ತಿಯ ವರ್ಗಾವಣೆ ಪ್ರಮಾಣ ಪತ್ರದಲ್ಲಿ ತಿಳಿಸಿರುವ ಷರತ್ತುಗಳಿಗೆ ಒಳಪಟ್ಟು ಇದನ್ನು ಬ್ಯಾಂಕಿಗೆ ವರ್ಗಾಯಿಸತಕ್ಕದ್ದು.

**ಷೆಡ್ಯೂಲ್ ಆಸ್ತಿಯ ವಿವರ**

ಮುನಿಸಿಪಲ್ ನಂ. 28/1, ಪಿಐಡಿ ನಂ.34–20–28/1, ಎಕೆ ಕಾಲೋನಿ, ಹೊಸಹಳ್ಳಿ, ವಿಜಯನಗರ, ಬಿ.ಬಿ.ಎಂಪಿ ವಿಭಾಗ, ನಂ.21, ವಾರ್ಡ್ ನಂ.34, ಬೆಂಗಳೂರು ಪೂರ್ವ ಪಶ್ಚಿಮ 18 ಅಡಿಗಳು, ಉತ್ತರ–ದಕ್ಷಿಣ 48 ಅಡಿಗಳು

**ಚೆಕ್ಕುಬಂದಿ:**

| | | |
|---|---|---|
| ಪೂರ್ವ | : | ನಂ.37ನೇ ಸ್ವತ್ತು |
| ಪಶ್ಚಿಮ | : | ಅದೇ ಸ್ವತ್ತಿನ ಉಳಿದ ಭಾಗ |
| ಉತ್ತರ | : | 20 ಅಡಿ ರಸ್ತೆ |
| ದಕ್ಷಿಣ | : | ಕನ್‌ಸರ್ವೆನ್‌ಸಿ |

**ಡಾ|| ಸುರೇಶಗೌಡ,**
ಸಹಕಾರ ಸಂಘಗಳ ಸಹಾಯಕ ನಿಬಂಧಕರು
ಹಾಗೂ ವಸೂಲಾಧಿಕಾರಿಗಳು, ಕೇಂದ್ರ ವಲಯ ವೃತ್ತ
ನಂ.146, 3ನೇ ಮುಖ್ಯರಸ್ತೆ, 8ನೇ ಅಡ್ಡರಸ್ತೆ, ಮಾರ್ಗೋಸ ರಸ್ತೆ,
ಮಲ್ಲೇಶ್ವರಂ ಸಹಕಾರ ಸಂಘದ ಕಟ್ಟಡ, ಮಲ್ಲೇಶ್ವರಂ, ಬೆಂಗಳೂರು–560003

**ಪಿ.ಆರ್. 1271**

## ಕೃಷಿ ಮಾರಾಟ ಇಲಾಖೆ

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ. 16, 11ನೇ ರಾಜಭವನ ರಸ್ತೆ, ಪಿ.ಬಿ. ನಂ.5309, ಬೆಂಗಳೂರು,**

**ಅಧಿಸೂಚನೆ**

**ಸಂ:ಕೃಮಾಇ/583/ನಿಯವಿ/2010, ದಿನಾಂಕ:01/08/2012.**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ(ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 6(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿನ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾಗಿರುವ ಡಾ:ಸಿ.ಸೋಮಶೇಖರ ಆದ ನಾನು ಚಿತ್ತಾಪುರ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ಕಾಲಕಾಲಕ್ಕೆ ಹೊರಡಿಸಲಾದ ಸರ್ಕಾರಿ ಅಧಿಸೂಚನೆಗಳ ಮೂಲಕ ಘೋಷಿಸಲಾಗಿರುವ ಅಧಿಸೂಚಿತ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ಕಾಳಗಿ ಗ್ರಾಮದ ಪರಿಮಿತಿಯೊಳಗಿನ ಪ್ರದೇಶವನ್ನು "ಉಪ ಮಾರುಕಟ್ಟೆ" ಎಂದು ಮತ್ತು ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಸ್ಥಳವನ್ನು "ಉಪ ಮಾರುಕಟ್ಟೆ ಪ್ರಾಂಗಣ" ಎಂದು ಘೋಷಿಸಿದ್ದೇನೆ.

**ಕೃಷಿ ಉತ್ಪನ್ನಗಳು**

1. ಜಾನುವಾರುಗಳು, 2. ಮೇಕೆಗಳು, 3.ಕುರಿಗಳು, 4.ಹತ್ತಿ (ಬೀಜ ತೆಗೆದ ಮತ್ತು ತೆಗೆಯದ), 5. ಎಲ್ಲಾ ಹೂ.ಗಳು, 6.ಸಜ್ಜೆ, 7.ಜವೆ ಗೋಧಿ, 8.ಜೋಳ, 9.ಕಂಬು, 10.ಮೆಕ್ಕೆಜೋಳ, 11.ನವಣೆ, 12.ಭತ್ತ, 13.ರಾಗಿ, 14.ಅಕ್ಕಿ 15.ಸಾಮೆ (ಸಾವೆ), 16.ಗೋಧಿ, 17.ಅಂಟುವಾಳ, 18.ಬೊಂಬು, 19.ಬೆತ್ತ, 20.ಹಿಪ್ಪೆಬೀಜ, 21.ಹೊಂಗೇಬೀಜ, 22.ಬೇವಿನಬೀಜ, 23.ಸೀಗೇಕಾಯಿ, 24.ಹುಣಸೇಹಣ್ಣು, 25.ಹುಣಸೇಬೀಜ, 26.ಸೇಬು, 27.ಬಾಳೆಹಣ್ಣು, 28.ಬೋರೆಹಣ್ಣು, 29.ಹುಳಿಹಣ್ಣುಗಳು, 30.ಚಕ್ಕೋತನ ಹಣ್ಣು, 31.ಪೇರಲೆಹಣ್ಣು (ಸೀಬೆಹಣ್ಣು), 32.ದ್ರಾಕ್ಷಿ, 33.ಹಲಸಿನಹಣ್ಣು, 34.ಜಂಬುನೇರಳೆಹಣ್ಣು, 35.ನಿಂಬೆಹಣ್ಣು, 36.ಕರಬೂಜ, 37.ಮಾವಿನಹಣ್ಣು, 38.ಮೂಸಂಬಿ, 39.ಮರಸೇಬು, 40.ಪೈನಾಪಲ್ (ಅನಾನಸ್), 41.ಪಪ್ಪಾಯಿಹಣ್ಣು (ಪರಂಗಿಹಣ್ಣು), 42.ದಾಳಿಂಬೆಹಣ್ಣು, 43.ಸಪೋಟಾ, 44.ಸಿದ್ದೋಟ, 45.ಕಿತ್ತಳೆ, 46.ಕಲ್ಲಂಗಡಿ, 47.ನೆಲಗಡಲೆ(ಶೇಂಗಾ) (ಕಾಯಿ ಮತ್ತು ಬೀಜ), 48.ಹರಳುಬೀಜ, 49.ಹತ್ತಿಬೀಜ, 50.ಅಗಸೆಬೀಜ, 51.ಸಾಸುವೆ, 52.ಹುಚ್ಚೆಳ್ಳು, 53.ಕುಸುಬೆ, 54.ಎಳ್ಳು, 55.ಸೂರ್ಯಕಾಂತಿಬೀಜ, 56.ಸೋಯಾಬಿನ್, 57.ಅಡಿಕೆ, 58.ಗೋಡಂಬಿಬೀಜ, 59.ಒಣಮೆಣಸಿನಕಾಯಿ, 60.ತೆಂಗಿನಕಾಯಿ, 61.ಕೊಬ್ಬರಿ, 62.ಕೊತ್ತಂಬರಿಬೀಜ (ಧನಿಯಾ), 63.ಬೆಳ್ಳುಳ್ಳಿ, 64.ಶುಂಠಿ, 65.ಮೆಂತ್ಯ, 66.ಕಾಳುಮೆಣಸು, 67.ಅರಿಶಿನ, 68.ಅಲಸಂದೆ(ಇಡೀ ಮತ್ತು ಒಡೆದ), 69.ಅವರೆ (ಇಡೀ ಮತ್ತು ಒಡೆದ), 70.ಕಡಲೆ (ಇಡೀ ಮತ್ತು ಒಡೆದ), 71.ಉದ್ದು(ಇಡೀ ಮತ್ತು ಒಡೆದ), 72.ಬುಲ್ಲರ್(ಇಡೀ ಮತ್ತು ಒಡೆದ) 73.ಹೆಸರು (ಇಡೀ ಮತ್ತು ಒಡೆದ), 74.ಹುರುಳಿ, 75.ಲಾಕ್ (ಇಡೀ ಮತ್ತು ಒಡೆದ), 76.ಮಡಿಕೆ(ಮಟಕಿ) (ಇಡೀ ಮತ್ತು ಒಡೆದ), 77.ಚೆನ್ನಂಗಿ(ಮಸೂರಿ)(ಇಡೀ ಮತ್ತು ಒಡೆದ), 78.ಬಟಾಣಿ, 79.ತೊಗರಿ (ಇಡೀ ಮತ್ತು ಒಡೆದ), 80.ಮೋತ್ (ಇಡೀ ಮತ್ತು ಒಡೆದ), 81.ಎಲ್ಲಾ ತರಕಾರಿಗಳು(ಸೊಪ್ಪುಗಳು ಸೇರಿಸಿ)(ಗರ್ಕಿನ್ ಹೊರತುಪಡಿಸಿ), 82.ಕಾಯಿಗಳು, 83.ಹಸಿರುಮೆಣಸಿನಕಾಯಿ, 84.ಈರುಳ್ಳಿ, 85.ಆಲೂಗಡ್ಡೆ, 86.ಸುವರ್ಣಗೆಡ್ಡೆ, 87.ಸಿಹಿಗೆಣಸು (ಗೆಣಸು), 88.ಟೊಮ್ಯಾಟೋ, 89.ವೀಳ್ಯೆದೆಲೆ, 90.ಬೆಲ್ಲ, 91.ತೆಂಗಿನಕಡ್ಡಿ, 92.ಒಣದ್ರಾಕ್ಷಿ.

**ಅನುಸೂಚಿ**

ಕಾಳಗಿ ಗ್ರಾಮದ ಪರಿಮಿತಿಯೊಳಗೆ ಹಾಲಿ ವ್ಯಾಪಾರ ನಡೆಯುವ ಈ ಕೆಳಗಿನ ಸೀಮಾಬದ್ಧ ಸ್ಥಳ:–

ಪೂರ್ವಕ್ಕೆ : ಭರತನೂರಿಗೆ ಹೋಗುವ ದಾರಿ.

ಪಶ್ಚಿಮಕ್ಕೆ : ಲಾಲ ಹಮ್ಮದ ದರ್ಗಾ

ಉತ್ತರಕ್ಕೆ : ರಾಮನಗರಕ್ಕೆ ಹೋಗುವ ದಾರಿ.

ದಕ್ಷಿಣಕ್ಕೆ : ಶ್ರೀ ಕಾಳೇಶ್ವರ ದೇವಸ್ಥಾನ.

**ಡಾ:ಸಿ.ಸೋಮಶೇಖರ**
ನಿರ್ದೇಶಕರು

## ಕೃಷಿ ಮಾರಾಟ ಇಲಾಖೆ

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ. 16, 11ನೇ ರಾಜಭವನ ರಸ್ತೆ, ಪಿ.ಬಿ. ನಂ.5309, ಬೆಂಗಳೂರು,**

**ಅಧಿಸೂಚನೆ**

**ಸಂ:ಕೃಮಾಇ/494/ನಿಯವಿ/2011, ದಿನಾಂಕ:01/08/2012**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ(ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 6(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿನ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾಗಿರುವ ಡಾ:ಸಿ.ಸೋಮಶೇಖರ ಆದ ನಾನು ಹರಪನಹಳ್ಳಿ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ಕಾಲಕಾಲಕ್ಕೆ ಹೊರಡಿಸಲಾದ ಸರ್ಕಾರಿ ಅಧಿಸೂಚನೆಗಳ ಮೂಲಕ ಘೋಷಿಸಲಾಗಿರುವ ಅಧಿಸೂಚಿತ ಕೃಷಿ ಉತ್ಪನ್ನಗಳ ಮಾರಾಟ ನಿಯಂತ್ರಣಕ್ಕಾಗಿ ತೆಲಗಿ ಮತ್ತು ಅರಸೀಕೆರೆ ಗ್ರಾಮಗಳ ಪರಿಮಿತಿಯೊಳಗಿನ ಪ್ರದೇಶವನ್ನು "ಉಪ ಮಾರುಕಟ್ಟೆ" ಗಳೆಂದು ಮತ್ತು ಈ ಕೆಳಗಿನ ಅನುಸೂಚಿ–"ಎ" ಮತ್ತು "ಬಿ" ಯಲ್ಲಿ ನಿರ್ಧಿಷ್ಟಪಡಿಸಿದ ಸ್ಥಳಗಳನ್ನು "ಉಪ ಮಾರುಕಟ್ಟೆ ಪ್ರಾಂಗಣ" ಗಳೆಂದು ಘೋಷಿಸಿದ್ದೇನೆ.

**ಕೃಷಿ ಉತ್ಪನ್ನಗಳು**

1. ಜಾನುವಾರುಗಳು, 2. ಮೇಕೆಗಳು, 3.ಕುರಿಗಳು, 4.ಹತ್ತಿ (ಬೀಜ ತೆಗೆದ ಮತ್ತು ತೆಗೆಯದ), 5. ಎಲ್ಲಾ ಹೂ.ಗಳು, 6.ಸಜ್ಜೆ, 7.ಜವೆ ಗೋಧಿ, 8.ಜೋಳ, 9.ಕಂಬು, 10.ಮೆಕ್ಕೆಜೋಳ, 11.ನವಣೆ, 12.ಭತ್ತ, 13.ರಾಗಿ, 14.ಅಕ್ಕಿ 15.ಸಾಮೆ (ಸಾವೆ), 16.ಗೋಧಿ, 17.ಅಂಟುವಾಳ, 18.ಬೊಂಬು, 19.ಬೆತ್ತ, 20.ಹಿಪ್ಪೆಬೀಜ, 21.ಹೊಂಗೇಬೀಜ, 22.ಬೇವಿನಬೀಜ, 23.ಸೀಗೇಕಾಯಿ, 24.ಹುಣಸೇಹಣ್ಣು, 25.ಹುಣಸೇಬೀಜ, 26.ಸೇಬು, 27.ಬಾಳೆಹಣ್ಣು, 28.ಬೋರೆಹಣ್ಣು, 29.ಹುಳಿಹಣ್ಣುಗಳು, 30.ಚಕ್ಕೋತನ ಹಣ್ಣು, 31.ಪೇರಲೆಹಣ್ಣು (ಸೀಬೆಹಣ್ಣು), 32.ದ್ರಾಕ್ಷಿ, 33.ಹಲಸಿನಹಣ್ಣು, 34.ಜಂಬುನೇರಳೆಹಣ್ಣು, 35.ನಿಂಬೆಹಣ್ಣು, 36.ಕರಬೂಜ, 37.ಮಾವಿನಹಣ್ಣು, 38.ಮೂಸಂಬಿ, 39.ಮರಸೇಬು, 40.ಪೈನಾಪಲ್ (ಅನಾನಸ್), 41.ಪಪ್ಪಾಯಿಹಣ್ಣು (ಪರಂಗಿಹಣ್ಣು), 42.ದಾಳಿಂಬೆಹಣ್ಣು, 43.ಸಪೋಟಾ, 44.ಸಿದ್ದೋಟ, 45.ಕಿತ್ತಳೆ, 46.ಕಲ್ಲಂಗಡಿ, 47.ನೆಲಗಡಲೆ(ಶೇಂಗಾ) (ಕಾಯಿ ಮತ್ತು ಬೀಜ), 48.ಹರಳುಬೀಜ, 49.ಹತ್ತಿಬೀಜ, 50.ಅಗಸೆಬೀಜ, 51.ಸಾಸುವೆ, 52.ಹುಚ್ಚೆಳ್ಳು, 53.ಕುಸುಬೆ, 54.ಎಳ್ಳು, 55.ಸೂರ್ಯಕಾಂತಿಬೀಜ, 56.ಸೋಯಾಬಿನ್, 57.ಅಡಿಕೆ, 58.ಗೋಡಂಬಿಬೀಜ, 59.ಒಣಮೆಣಸಿನಕಾಯಿ, 60.ತೆಂಗಿನಕಾಯಿ, 61.ಕೊಬ್ಬರಿ, 62.ಕೊತ್ತಂಬರಿಬೀಜ (ಧನಿಯಾ), 63.ಬೆಳ್ಳುಳ್ಳಿ, 64.ಶುಂಠಿ, 65.ಮೆಂತ್ಯ, 66.ಕಾಳುಮೆಣಸು, 67.ಅರಿಶಿನ, 68.ಅಲಸಂದೆ(ಇಡೀ ಮತ್ತು ಒಡೆದ), 69.ಅವರೆ (ಇಡೀ ಮತ್ತು ಒಡೆದ), 70.ಕಡಲೆ (ಇಡೀ ಮತ್ತು ಒಡೆದ), 71.ಉದ್ದು (ಇಡೀ ಮತ್ತು ಒಡೆದ), 72.ಬುಲ್ಲರ್ (ಇಡೀ ಮತ್ತು ಒಡೆದ), 73.ಹೆಸರು (ಇಡೀ ಮತ್ತು ಒಡೆದ), 74.ಹುರುಳಿ, 75.ಲಾಕ್ (ಇಡೀ ಮತ್ತು ಒಡೆದ), 76.ಮಡಿಕೆ (ಮಟಕಿ) (ಇಡೀ ಮತ್ತು ಒಡೆದ), 77.ಚೆನ್ನಂಗಿ (ಮಸೂರಿ) (ಇಡೀ ಮತ್ತು ಒಡೆದ), 78.ಬಟಾಣಿ, 79.ತೊಗರಿ (ಇಡೀ ಮತ್ತು ಒಡೆದ), 80.ಮೋತ್ (ಇಡೀ ಮತ್ತು ಒಡೆದ), 81.ಎಲ್ಲಾ ತರಕಾರಿಗಳು (ಸೊಪ್ಪುಗಳು ಸೇರಿಸಿ) (ಗರ್ಕಿನ್ ಹೊರತುಪಡಿಸಿ), 82.ಕಾಯಿಗಳು, 83.ಹಸಿರುಮೆಣಸಿನಕಾಯಿ, 84.ಈರುಳ್ಳಿ, 85.ಆಲೂಗಡ್ಡೆ, 86.ಸುವರ್ಣಗೆಡ್ಡೆ, 87.ಸಿಹಿಗೆಣಸು (ಗೆಣಸು), 88.ಟೊಮ್ಯಾಟೋ, 89.ವೀಳ್ಯೆದೆಲೆ, 90.ಬೆಲ್ಲ, 91.ತೆಂಗಿನಕಡ್ಡಿ, 92.ಒಣದ್ರಾಕ್ಷಿ.

**ಅನುಸೂಚಿ–ಎ**

ತೆಲಗಿ ಗ್ರಾಮದ ಪರಿಮಿತಿಯೊಳಗೆ ಹಾಲಿ ಸಂತೆ ನಡೆಯುವ ಈ ಕೆಳಗಿನ ಸೀಮಾಬದ್ಧ ಸ್ಥಳ:–

ಪೂರ್ವಕ್ಕೆ : ಯಡಿಯಹಳ್ಳಿ–ಶಿಂಗ್ರಿಹಳ್ಳಿ ರಸ್ತೆ.

ಪಶ್ಚಿಮಕ್ಕೆ : ದುರ್ಗಮ್ಮನ ದೇವಸ್ಥಾನ.

ಉತ್ತರಕ್ಕೆ : ರಂಗಮಂದಿರ ಹಾಗೂ ಸರ್ಕಾರಿ ಪ್ರಾಥಮಿಕ ಶಾಲೆ.

ದಕ್ಷಿಣಕ್ಕೆ : ಆಂಜನೇಯ ದೇವಸ್ಥಾನ ಹಾಗೂ ಬಸ್ಟ್ಯಾಂಡ್‌ಗೆ ಹೋಗುವ ರಸ್ತೆ.

**ಅನುಸೂಚಿ–ಬಿ**

ಅರಸೀಕೆರೆ ಗ್ರಾಮದ ಪರಿಮಿತಿಯೊಳಗೆ ಹಾಲಿ ಸಂತೆ ನಡೆಯುವ ಈ ಕೆಳಗಿನ ಸೀಮಾಬದ್ಧ ಸ್ಥಳ:–

ಪೂರ್ವಕ್ಕೆ : ಶಾಂತಪ್ರಕಾಶ ನಗರಕ್ಕೆ ಹೋಗುವ ರಸ್ತೆ.

ಪಶ್ಚಿಮಕ್ಕೆ : ಹರಪನಹಳ್ಳಿ–ದಾವಣಗೆರೆ ಮುಖ್ಯರಸ್ತೆ.

ಉತ್ತರಕ್ಕೆ : ಪ್ರೌಢಶಾಲಾ ಆಟದ ಮೈದಾನ.

ದಕ್ಷಿಣಕ್ಕೆ : ಅರಸೀಕೆರೆ–ಮತ್ತಿಹಳ್ಳಿ–ಸಾಸ್ವಿಹಳ್ಳಿ ರಸ್ತೆ.

**ಡಾ:ಸಿ.ಸೋಮಶೇಖರ**
ನಿರ್ದೇಶಕರು

**ಪಿ.ಆರ್. 1072**

## ಬಾಗೇಪಲ್ಲಿ ತಾಲ್ಲೂಕು ಮುಜರಾಯಿ ದೇವಾಲಯಗಳು ಸ್ಥಿರಾಸ್ಥಿಯ ವಿವರಗಳು

**ಸಂಖ್ಯೆ : ಡಿ.ವಿ.ಎಸ್./ಸಿ.ಆರ್./261/11–12, ದಿನಾಂಕ 11–6–2012**

**(ಕ್ರ.ಸಂ. 106 ರಿಂದ 108)**

| ಕ್ರಮ ಸಂಖ್ಯೆ | ದೇವಸ್ಥಾನದ ಹೆಸರು ಮತ್ತು ಗ್ರಾಮ | ದೇವಾಲಯದ ಗ್ರಾಮ | | ವಿಸ್ತೀರ್ಣ | ಚೆಕ್ಕುಬಂದಿ |
|---|---|---|---|---|---|
| 106 | ಶ್ರೀ ಪಾಳ್ಯಕೆರೆ ವೆಂಕಟರಮಣಸ್ವಾಮಿ ದೇವರು ಪಾಳ್ಯಕೆರೆ | ಪಾಳ್ಯಕೆರೆ | ಅಸೆಸ್‌ಮೆಂಟ್ 216 | 110x104 | ಪೂರ್ವಕ್ಕೆ:– ಗ್ರಾಮಠಾಣೆ<br>ಪಶ್ಚಿಮಕ್ಕೆ:– ಗ್ರಾಮಠಾಣೆ<br>ಉತ್ತರಕ್ಕೆ:– ಗ್ರಾಮಠಾಣೆ<br>ದಕ್ಷಿಣಕ್ಕೆ:– ಗ್ರಾಮಠಾಣೆ |
| | | ಪಾಳ್ಯಕೆರೆ | ಸ.ನಂ. 266 | 0–13 | ಪೂರ್ವಕ್ಕೆ:– ಸ.ನಂ. 172ರ ಹಿಡುವಳಿ<br>ಪಶ್ಚಿಮಕ್ಕೆ:– ಸ.ನಂ. 196, 195ರ ಹಿಡುವಳಿ<br>ಉತ್ತರಕ್ಕೆ:– ಸ.ನಂ. 255ರ ಜಮೀನು<br>ದಕ್ಷಿಣಕ್ಕೆ:– ಸ.ನಂ. 267ರ ಜಮೀನು |
| | | ಪಾಳ್ಯಕೆರೆ | ಸ.ನಂ. 149 | 0–09 | ಪೂರ್ವಕ್ಕೆ:– ಸ.ನಂ. 137ರ ಜಮೀನು<br>ಪಶ್ಚಿಮಕ್ಕೆ:– ಸ.ನಂ. 148ರ ಜಮೀನು<br>ಉತ್ತರಕ್ಕೆ:– ಸ.ನಂ. 137ರ ಜಮೀನು<br>ದಕ್ಷಿಣಕ್ಕೆ:– ಸ.ನಂ. 137ರ ಜಮೀನು |
| | | ಪಾಳ್ಯಕೆರೆ | ಸ.ನಂ. 222 | 0–07 | ಪೂರ್ವಕ್ಕೆ:– ಸ.ನಂ. 224ರ ಹಿಡುವಳಿ<br>ಪಶ್ಚಿಮಕ್ಕೆ:– ಸ.ನಂ. 213ರ ಹಿಡುವಳಿ<br>ಉತ್ತರಕ್ಕೆ:– ಸ.ನಂ. 223ರ ಹಿಡುವಳಿ<br>ದಕ್ಷಿಣಕ್ಕೆ:– ಸ.ನಂ. 119ರ ಹಿಡುವಳಿ |
| | | ಪಾಳ್ಯಕೆರೆ | ಸ.ನಂ. 237 | 0–12 | ಪೂರ್ವಕ್ಕೆ:– ಸ.ನಂ. 238ರ ಹಿಡುವಳಿ<br>ಪಶ್ಚಿಮಕ್ಕೆ:– ಸ.ನಂ. 233ರ ಹಿಡುವಳಿ<br>ಉತ್ತರಕ್ಕೆ:– ಸ.ನಂ. 236ರ ಹಿಡುವಳಿ<br>ದಕ್ಷಿಣಕ್ಕೆ:– ಸ.ನಂ. 240ರ ಜಮೀನು |
| | | ಪಾಳ್ಯಕೆರೆ | ಸ.ನಂ. 119 | 4–01 | ಪೂರ್ವಕ್ಕೆ:– ಸ.ನಂ. 118ರ ಹಿಡುವಳಿ<br>ಪಶ್ಚಿಮಕ್ಕೆ:– ಸ.ನಂ. 120ರ ಹಿಡುವಳಿ<br>ಉತ್ತರಕ್ಕೆ:– ಮಾಚವಪಲ್ಲಿ ಗಡಿ<br>ದಕ್ಷಿಣಕ್ಕೆ:– ಸ.ನಂ. 126ರ |
| | | ಹೊಸಹುಡ್ಯ | ಸ.ನಂ. 189 | 0–18 | ಪೂರ್ವಕ್ಕೆ:– ಸ.ನಂ. 209 ರ<br>ಪಶ್ಚಿಮಕ್ಕೆ:– ಸ.ನಂ. 186<br>ಉತ್ತರಕ್ಕೆ:– 198 ರ<br>ದಕ್ಷಿಣಕ್ಕೆ:– ಹಳ್ಳ |

| ಕ್ರಮ ಸಂಖ್ಯೆ | ದೇವಸ್ಥಾನದ ಹೆಸರು ಮತ್ತು ಗ್ರಾಮ | ದೇವಾಲಯದ ಗ್ರಾಮ | | ವಿಸ್ತೀರ್ಣ | ಚೆಕ್ಕುಬಂದಿ |
|---|---|---|---|---|---|
| | | ಹೊಸಹುಡ್ಯ | ಸ.ನಂ. 189 | 0–29 | ಪೂರ್ವಕ್ಕೆ:– ಸ.ನಂ. 209ರ ಜಮೀನು<br>ಪಶ್ಚಿಮಕ್ಕೆ:– ಸ.ನಂ. 186ರ ಜಮೀನು<br>ಉತ್ತರಕ್ಕೆ:– 170 ರ ಜಮೀನು<br>ದಕ್ಷಿಣಕ್ಕೆ:– ಹಳ್ಳ |
| | | ಪೆದ್ದಪಲ್ಲಿ | ಸ.ನಂ. 211 | 0–38 | ಪೂರ್ವಕ್ಕೆ:–ಓಣಿ<br>ಪಶ್ಚಿಮಕ್ಕೆ:– ಸ.ನಂ. 210ರ ಹಿಡುವಳಿ ಜಮೀನು<br>ಉತ್ತರಕ್ಕೆ:– ಕೆರೆ<br>ದಕ್ಷಿಣಕ್ಕೆ:– ಸ.ನಂ. 210ರ ಹಿಡುವಳಿ |
| | | ಪೆದ್ದಪಲ್ಲಿ | ಸ.ನಂ. 6 | 0–34 | ಪೂರ್ವಕ್ಕೆ:– ಸ.ನಂ. 8ರ ಹಿಡುವಳಿ<br>ಪಶ್ಚಿಮಕ್ಕೆ:– ಸ.ನಂ. 1ರ ಹಿಡುವಳಿ<br>ಉತ್ತರಕ್ಕೆ:– ಸ.ನಂ. 10ರ ಹಿಡುವಳಿ<br>ದಕ್ಷಿಣಕ್ಕೆ:– ಸ.ನಂ. 5ರ ಹಿಡುವಳಿ |
| | | ಪೆದ್ದಪಲ್ಲಿ | ಸ.ನಂ. 128 | 0–11 | ಪೂರ್ವಕ್ಕೆ:– ಸ.ನಂ. 126<br>ಪಶ್ಚಿಮಕ್ಕೆ:– ಸ.ನಂ. 144<br>ಉತ್ತರಕ್ಕೆ:– ಸ.ನಂ. 130<br>ದಕ್ಷಿಣಕ್ಕೆ:– ಸ.ನಂ. 126 |
| | | ಪೆದ್ದರಾಜಪಲ್ಲಿ | ಸ.ನಂ. 99 | 0–09 | ಪೂರ್ವಕ್ಕೆ:– ಸ.ನಂ. 98ರ ಹಿಡುವಳಿ<br>ಪಶ್ಚಿಮಕ್ಕೆ:– ಸ.ನಂ. 105ರ ಹಿಡುವಳಿ<br>ಉತ್ತರಕ್ಕೆ:– ಸ.ನಂ. 98ರ ಹಿಡುವಳಿ<br>ದಕ್ಷಿಣಕ್ಕೆ:– ಸ.ನಂ. 103ರ ಹಿಡುವಳಿ |
| | | ಪೆದ್ದರಾಜಪಲ್ಲಿ | ಸ.ನಂ. 63 | 4–39 | ಪೂರ್ವಕ್ಕೆ:– ಸ.ನಂ. 138 ರ ಮತ್ತು ಸ.ನಂ. 143<br>ಪಶ್ಚಿಮಕ್ಕೆ:– ಚೀಗಟಗಲಗುಟ್ಟ ಗಡಿ<br>ಉತ್ತರಕ್ಕೆ:– ಸ.ನಂ. 143ರ ಗಡಿ<br>ದಕ್ಷಿಣಕ್ಕೆ:– ಸ.ನಂ. 62ರ ಗಡಿ |
| | | ಚೀಗಟೀಗಲಗುಟ್ಟ | ಸ.ನಂ. 29 | 9–00 | ಪೂರ್ವಕ್ಕೆ:– ಪೆದ್ದರಾಜಪಲ್ಲಿ ಗಡಿ<br>ಪಶ್ಚಿಮಕ್ಕೆ:– ಕೆರೆ ಮತ್ತು ಸ.ನಂ. 31ರ ಹಿಡುವಳಿ<br>ಉತ್ತರಕ್ಕೆ:– ಸ.ನಂ. 28ರ ಹಿಡುವಳಿ<br>ದಕ್ಷಿಣಕ್ಕೆ:– ಸ.ನಂ. 46 ಮತ್ತು 47ರ ಹಿಡುವಳಿ |
| | | ಚೀಗಟೀಗಲಗುಟ್ಟ | ಸ.ನಂ. 9 | 0–28 | ಪೂರ್ವಕ್ಕೆ:– ಸ.ನಂ. 6ರ ಹಿಡುವಳಿ<br>ಪಶ್ಚಿಮಕ್ಕೆ:– ಸ.ನಂ. 10ರ ಹಿಡುವಳಿ<br>ಉತ್ತರಕ್ಕೆ:– ಸ.ನಂ. 15ರ ಹಿಡುವಳಿ<br>ದಕ್ಷಿಣಕ್ಕೆ:– ಸ.ನಂ. 8ರ ಸ.ನಂ. 7ರ ಹಿಡುವಳಿ |

| ಕ್ರಮ ಸಂಖ್ಯೆ | ದೇವಸ್ಥಾನದ ಹೆಸರು ಮತ್ತು ಗ್ರಾಮ | ದೇವಾಲಯದ ಗ್ರಾಮ | | ವಿಸ್ತೀರ್ಣ | ಚೆಕ್ಕುಬಂದಿ |
|---|---|---|---|---|---|
| | | ಚಾಕವೇಲು | ಸ.ನಂ. 171 | 0–10 | ಪೂರ್ವಕ್ಕೆ:– ಸ.ನಂ. 169ರ<br>ಪಶ್ಚಿಮಕ್ಕೆ:– ಹಳ್ಳ<br>ಉತ್ತರಕ್ಕೆ:– ಸ.ನಂ. 172<br>ದಕ್ಷಿಣಕ್ಕೆ:– ಸ.ನಂ. 169 |
| | | ಚಾಕವೇಲು | ಸ.ನಂ. 6 | 0–22 | ಪೂರ್ವಕ್ಕೆ:– ಸ.ನಂ. 5ರ ಜಮೀನು<br>ಪಶ್ಚಿಮಕ್ಕೆ:– ಸ.ನಂ. 1 ಮತ್ತು ಸ.ನಂ. 7<br>ಉತ್ತರಕ್ಕೆ:– ಸ.ನಂ. 12ರ ಜಮೀನು<br>ದಕ್ಷಿಣಕ್ಕೆ:– ಸ.ನಂ. 5 |
| 107 | ಶ್ರೀ ನರಸಿಂಹಸ್ವಾಮಿ ದೇವರು ರಾಶ್ಚೇರವು | ರಾಶ್ಚೆರುವು | ಹೆಚ್.ಎಲ್. ನಂ. 228 | 50x50<br>2500<br>ಚದರಡಿ | ಪೂರ್ವಕ್ಕೆ:– ಗ್ರಾಮಠಾಣೆ<br>ಪಶ್ಚಿಮಕ್ಕೆ:– ರಾಶ್ಚೇರವುಯಿಂದ ರಾಮಸ್ವಾಮಿಪಲ್ಲಿ ರಸ್ತೆ<br>ಉತ್ತರಕ್ಕೆ:– ಗ್ರಾಮಠಾಣೆ ಮತ್ತು ರಸ್ತೆ<br>ದಕ್ಷಿಣಕ್ಕೆ:– ರಸ್ತೆ ಮತ್ತು ಗ್ರಾಮಠಾಣೆ |
| 108 | ಶ್ರೀ ಗಂಗಮ್ಮ ದೇವಾಲಯ ಷೇರ್‌ಖಾನ್‌ಕೋಟೆ | ಚೇಳೂರು | ಸ.ನಂ. 52 | 93/3x61/2<br>= 65.34<br>ಚದರಡಿ | ಪೂರ್ವಕ್ಕೆ:– ಬಾಗೇಪಲ್ಲಿಯಿಂದ ಚೇಳೂರು ರಸ್ತೆ<br>ಪಶ್ಚಿಮಕ್ಕೆ:– ಕೆರೆ ಅಂಗಳ<br>ಉತ್ತರಕ್ಕೆ:– ಕೆರೆ ಅಂಗಳ<br>ದಕ್ಷಿಣಕ್ಕೆ:– ಕೆರೆ ಅಂಗಳ |

**ಪಿ.ಆರ್. 821** **ತಹಸೀಲ್ದಾರ್ ಬಾಗೇಪಲ್ಲಿ ತಾಲ್ಲೂಕು** **ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ.**

## ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರ ಕಛೇರಿ ರಾಯಚೂರು

**ಅಂತಿಮ ನೋಟಿಸ್ (ಕೊನೆಯ)**

**ಸಂಖ್ಯೆ : ಆವಿ1/ದೂರು/ಅ.ಗೈ.ಹ/61/2010–11, ದಿನಾಂಕ : 17–08–2012**

**ವಿಷಯ :** ಶ್ರೀಮತಿ ಗಝಾಲ ಆಫ್ರೀನ್ ಸ.ಶಿ. ಸ.ಉರ್ದು ಪ್ರೌ.ಶಾಲೆ ಲಿಂಗಸೂಗೂರು ಇವರು ದೀರ್ಘಾವಧಿವರೆಗೆ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುವ ಬಗ್ಗೆ.

**ಉಲ್ಲೇಖ :**
1. ಅಧ್ಯಕ್ಷರು ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿ ಸ.ಉರ್ದು ಪ್ರೌಢ ಶಾಲೆ ಲಿಂಗಸೂಗೂರು ಇವರ ಅರ್ಜಿ ದಿನಾಂಕ 04–12–2010.
2. ಈ ಕಛೇರಿಯ ನೋಟಿಸ್ ಸಮ ಸಂಖ್ಯೆ: ದಿನಾಂಕ : 04–01–2011.
3. ಈ ಕಛೇರಿಯ ಅಂತಿಮ ನೋಟಿಸ್ ಸಮ ಸಂಖ್ಯೆ ದಿನಾಂಕ : 24–06–2011.
4. ಮುಖ್ಯ ಗುರುಗಳು ಸ.ಉರ್ದು ಪ್ರೌಢ ಶಾಲೆ ಲಿಂಗಸೂಗೂರು ಇವರ ಪತ್ರ ದಿನಾಂಕ : 20–03–2012.
5. ಈ ಕಛೇರಿಯ ಅಂತಿಮ ನೋಟಿಸ್ (ಕೊನೆಯ) ಸಮ ಸಂಖ್ಯೆ ದಿನಾಂಕ : 03–04–2012.
6. ಈ ಕಛೇರಿಯ ಪತ್ರ ಸಮ ಸಂಖ್ಯೆ ದಿನಾಂಕ : 16–06–2012.

ಪ್ರಸ್ತುತ ವಿಷಯ ಕುರಿತು ಉಲ್ಲೇಖ 1 ರನ್ವಯ ಅಧ್ಯಕ್ಷರು ಶಾಲಾ ಅಭಿವೃದ್ಧಿ ಹಾಗೂ ಮೇಲುಸ್ತುವಾರಿ ಸಮಿತಿ ಸ. ಉರ್ದು ಪ್ರೌಢ ಶಾಲೆ ಲಿಂಗಸೂಗೂರು ಇವರು ಶ್ರೀಮತಿ ಗಝಾಲ ಆಫ್ರೀನ್ ಸ.ಶಿ. ಸ.ಉರ್ದು ಪ್ರೌ. ಶಾಲೆ ಲಿಂಗಸೂಗೂರು ಇವರು ದಿನಾಂಕ : 06–11–2009ರಿಂದ ಶಾಲಾ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುತ್ತಾರೆಂದು ವರದಿ ಮಾಡಿರುತ್ತಾರೆ. ಈ ಹಿನ್ನೆಲೆಯಲ್ಲಿ ಉಲ್ಲೇಖ 2 ರನ್ವಯ ನಿಮಗೆ ನೋಟಿಸ್ ಜಾರಿಮಾಡಲಾಗಿತ್ತು. ಆದರೂ ನೀವು ಶಾಲಾ ಕರ್ತವ್ಯಕ್ಕೆ ಹಾಜರಾಗದೇ ಇರುವುದರಿಂದ ಪುನಃ ಉಲ್ಲೇಖ 3 ರನ್ವಯ ಅಂತಿಮವಾಗಿ ಕರ್ತವ್ಯಕ್ಕೆ ಹಾಜರಾಗಲು ಸೂಚಿಸಲಾಗಿತ್ತು. ಉಲ್ಲೇಖ 4 ರನ್ವಯ ಮುಖ್ಯ ಗುರುಗಳು ಸರಕಾರಿ ಉರ್ದು ಪ್ರೌಢ ಶಾಲೆ, ಲಿಂಗಸೂಗೂರು ಇವರು ದಿನಾಂಕ : 20–03–2012ರಂದು ವರದಿ ಸಲ್ಲಿಸಿದ್ದು, ನೀವು ದಿನಾಂಕ : 01–04–2011 ರಿಂದ ಇಲ್ಲಿಯವರೆಗೆ ಯಾವುದೇ ರೀತಿಯ ರಜೆ ಅರ್ಜಿ ಸಲ್ಲಿಸದೇ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುತ್ತಾರೆ. ಶಾಲಾ ವಿದ್ಯಾರ್ಥಿಗಳಿಗೆ ನಿಮ್ಮ ಗೈರು ಹಾಜರಿ ಇರುವುದರಿಂದ ಬಹಳ ತೊಂದರೆ ಆಗಿರುತ್ತದೆ ಎಂದು ವರದಿಸಿರುತ್ತಾರೆ. ನಿಮಗೆ ಈ ಕಛೇರಿಯಿಂದ ಹಲವಾರು ಬಾರಿ ನೋಟಿಸ್/ಅಂತಿಮ ನೋಟಿಸ್ ನೀಡಿದರೂ ಸಹ ಕರ್ತವ್ಯಕ್ಕೆ ಹಾಜರಾಗದೇ ಗೈರು ಹಾಜರಾಗಿ ಸೇವೆಯಲ್ಲಿ ಮುಂದುವರೆಯುವುದು ಆಸಕ್ತಿ ಇರುವುದಿಲ್ಲವೆಂದು ಕಂಡುಬಂದಿರುತ್ತದೆ. ಉಲ್ಲೇಖ 5 ರನ್ವಯ ಅಂತಿಮ ನೋಟಿಸನ್ನು (ಕೊನೆಯ) ನೀಡಿದರೂ ನೀವು ಇಲ್ಲಿಯವರೆಗೆ ಶಾಲಾ ಕರ್ತವ್ಯಕ್ಕೆ ಹಾಜರಾಗದೇ ಅನಧಿಕೃತವಾಗಿ ಗೈರು ಹಾಜರಿ ಆಗಿರುತ್ತೀರಿ. ಉಲ್ಲೇಖ 6 ರನ್ವಯ ನಿಮ್ಮ ದೀರ್ಘಕಾಲದ ಗೈರು ಹಾಜರಿ ಕುರಿತು ಅಂತಿಮ ನೋಟಿಸ್‌ನ್ನು ಸ್ಥಳೀಯ/ರಾಜ್ಯ ದಿನಪತ್ರಿಕೆಯಲ್ಲಿ ಪ್ರಕಟಿಸಿದರೂ ನೀವು ಇದುವರೆಗೆ ಕರ್ತವ್ಯಕ್ಕೆ ಹಾಜರಾಗದೇ ಅನಧಿಕೃತವಾಗಿ ಗೈರು ಹಾಜರಿ ಆಗಿರುತ್ತೀರಿ.

ಈ ಎಲ್ಲ ಉಲ್ಲೇಖಗಳ ಹಿನ್ನೆಲೆಯಲ್ಲಿ ನಿಮಗೆ ಕರ್ತವ್ಯಕ್ಕೆ ಹಾಜರಾಗಲು ಸೂಚನೆ/ಹಲವು ಬಾರಿ ನೋಟಿಸ್‌ನ್ನು ನೀಡಿದರೂ ಸಹ ನೀವು ಶಾಲಾ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲ. ಕಾರಣ ಈ ಕುರಿತು ಅಂತಿಮ ನೋಟಿಸ್‌ನ್ನು ಕರ್ನಾಟಕ ರಾಜ್ಯ ಪತ್ರಿಕೆಯಲ್ಲಿ ಪ್ರಕಟಿಸಿದ್ದು, ಪ್ರಕಟವಾದ 15 ದಿವಸದೊಳಗಾಗಿ ನೀವು ಕರ್ತವ್ಯಕ್ಕೆ ಗೈರು ಹಾಜರಾಗಿರುವುದಕ್ಕೆ ಸಮರ್ಥನೀಯವಾದ ದಾಖಲೆ ಹಾಗೂ ಸಕಾರಣಗಳೊಂದಿಗೆ ಈ ಕಛೇರಿಗೆ ಸಲ್ಲಿಸಿ (ಹಾಜರಾಗಲು) ಅನುಮತಿ ಪಡೆದು ಹಾಜರಾಗಲು ಅಂತಿಮವಾಗಿ ಸೂಚಿಸಿದೆ. ಇದು ತಪ್ಪಿದಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮ 1957ರ ನಿಯಮ 108ರ ಪ್ರಕಾರ ನಿಮ್ಮನ್ನು ಸೇವೆಯಿಂದ ವಜಾಗೊಳಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಉಪನಿರ್ದೇಶಕರು (ಆ)
ಸಾರ್ವಜನಿಕ ಶಿಕ್ಷಣ ಇಲಾಖೆ, ರಾಯಚೂರು.

**ಪಿ.ಆರ್. 1197**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯದಲ್ಲಿ

**ಆದೇಶ ಸಂಖ್ಯೆ : ಬಿ3 : ಅಮೊ : ವಾಹನ : ವಿವ : 04/2010–11, ದಿನಾಂಕ : 16–06–2012**

**ಉಪಸ್ಥಿತರು :** ಆರ್. ರವಿಶಂಕರ್, ಭಾ.ಆ.ಸೇ.,
ಅಧಿಕೃತ ಅಧಿಕಾರಿ ಹಾಗೂ
ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ.

**ಪಿರ್ಯಾದಿದಾರರು :** ವಲಯ ಅರಣ್ಯಾಧಿಕಾರಿ,
ಅಂಬ್ಲಿಗೊಳ ವಲಯ (ಸಹಾಯಕ ಸರ್ಕಾರಿ ಅಭಿಯೋಜಕರು, ಸಾಗರ)

**ಆರೋಪಿಗಳು :** 1) ದೇವರಾಜ್ 2) ನಾಗರಾಜ್

**ಬಾಧ್ಯತೆದಾರರು :** ಯಾರು ಮುಂದೆ ಬಂದಿರುವುದಿಲ್ಲ.

**ಪ್ರಸ್ತಾವನೆ :**

ದಿನಾಂಕ : 31–05–2010ರಂದು ಒಂದು ವಾಹನ ಲಗೇಜ್ ಆಟೋ ಕೆಎ015–4883ರಲ್ಲಿ ಅಕ್ರಮವಾಗಿ ಬೀಟೆ ನಾಟಾವನ್ನು ಸಾಗಿಸುತ್ತಿರುವಾಗ ಅಂಬ್ಲಿಗೊಳ ವಲಯದ ವನಪಾಲಕ ಪತ್ತೆಹಚ್ಚಿ ಬರೆದ ಮಹಜರ್ ವಿವರ ಈ ಕೆಳಗಿನಂತಿದೆ.

ದಿನಾಂಕ : 31–05–2010 ರಂದು ಅಂಬ್ಲಿಗೊಳ ವಲಯದ ಚುರ್ಚಿಗುಂಡಿ ಶಾಖೆಯ ವನಪಾಲಕರು ಮತ್ತು ಸಿಬ್ಬಂದಿಯವರು ಚುರ್ಚಿಗುಂಡಿ ಶಾಖಾ ಅರಣ್ಯ ಪ್ರದೇಶವನ್ನು ಗಸ್ತು ತಿರುಗುತ್ತಿರುವಾಗ ಒಂದು ನೀಲಿ ಬಣ್ಣದ ಲಗೇಜ್ ಆಟೋ ನಂ. ಕೆಎ–15–4883 ಬರುತ್ತಿರುವುದನ್ನು ನಿಲ್ಲಿಸಿ, ಪರಿಶೀಲಿಸಲಾಗಿ ಅದರೊಳಗಡೆ ಬೀಟೆ 36 ಸೈಜುಗಳಿದ್ದು, ಈ ಸೈಜುಗಳು ಸೋಪಾಸೆಟ್ ಬಿಡಿಭಾಗಗಳಾಗಿದ್ದು, ಈ ಸೈಜುಗಳಿಗೆ ಇಲಾಖೆಯ ಯಾವುದೇ ಛಾಪಾದ ಗುರುತಿರಲಿಲ್ಲ. ಈ ಸೈಜುಗಳ ಬಗ್ಗೆ ಸಿಕ್ಕಿಬಿದ್ದ ಆಸಾಮಿಗಳನ್ನು ವಿಚಾರಿಸಲಾಗಿ ಚಾಲಕನಾದ ದೇವರಾಜ್ ಬಿನ್ ಭೀಮಪ್ಪ, 21 ವರ್ಷ, ವಿದ್ಯಾನಗರ, ಈಸೂರು ವಾಸಿ, ಹಾಗೂ ನಾಗರಾಜ್ ಬಿನ್ ಹಳೂರಪ್ಪ, 19 ವರ್ಷ, ಎ.ಕೆ. ಕಾಲೋನಿ, ಈಸೂರು ವಾಸಿಗಳೆಂದು ಮತ್ತು ಈ ಸೈಜುಗಳನ್ನು ಈಸೂರು ವಾಸಿ ಚಂದ್ರಪ್ಪ ಎಂಬುವರ ಆಟೋದಲ್ಲಿ ತುಂಬಿದರೆಂದು, ಈ ಸೈಜುಗಳಿಗೆ ರಹದಾರಿ ಇಲ್ಲವೆಂದು ತಿಳಿಸಿರುತ್ತಾರೆ. ಇದು ಅಕ್ರಮ ಸಾಗಾಣಿಕೆ ಎಂದು ಪರಿಗಣಿಸಿ, ಲಗೇಜ್ ಆಟೋ ಕೆಎ–15–4883 (ಛಾಸ್ಸಿಸ್ ನಂ. MD-2ALAL-ZZ-PUC-12199,

ಇಂಜಿನ್ ನಂ. BBM-BPG-18215) ಮತ್ತು ಬೀಟೆ ಸೈಜು 36=0.154 ಎಂ3 ಆಸಾಮಿಗಳನ್ನು, ಪ್ರಥಮ ವರ್ತಮಾನ ವರದಿ, ಮಹಜರ್ ವರದಿ, ಜಪ್ತಿ ವರದಿಯೊಂದಿಗೆ ಇಲಾಖಾ ಪರ ಜಪ್ತುಮಾಡಿ, ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 24, 62, 71(ಎ), 104 (ಎ) ಮತ್ತು ಕರ್ನಾಟಕ ಅರಣ್ಯ ಕಾನೂನು 1969ರ ಉಪ ನಿಯಮ 127, 144, 165ರ ಪ್ರಕಾರ ಅಂಬ್ಲಿಗೊಳ ವಲಯದ ಅರಣ್ಯ ಮೊಕದ್ದಮೆ ಸಂಖ್ಯೆ : 24/10–11ನ್ನು ವನಪಾಲಕರು ದಾಖಲಿಸಿ ವಾಹನ, ಅರಣ್ಯ ಉತ್ಪನ್ನ ಮತ್ತು ಆಸಾಮಿಗಳನ್ನು ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ.

ನಂತರ ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ ಇವರು ಆರೋಪಿಗಳನ್ನು ನ್ಯಾಯಾಲಯಕ್ಕೆ ಒಪ್ಪಿಸಿ, ವಾಹನ ಮತ್ತು ದಾಖಲೆಗಳನ್ನು ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ಸಮಕ್ಷಮ ಹಾಜರ್ಪಡಿಸಿರುತ್ತಾರೆ. ನಂತರ ಈ ವಾಹನವನ್ನು ಸರ್ಕಾರಿ ನಾಟಾ ಸಂಗ್ರಹಾಲಯದಲ್ಲಿರುವ ವಾಹನ ಶೆಡ್ಡಿನಲ್ಲಿ ಸುರಕ್ಷತೆಗಾಗಿಡಲು ವಲಯ ಅರಣ್ಯಾಧಿಕಾರಿ, ಸರ್ಕಾರಿ ನಾಟಾ ಸಂಗ್ರಹಾಲಯ, ಸಾಗರ ಇವರ ಸುಪರ್ಧಿಗೆ ಕೊಡಲು ಆದೇಶವಾಗಿದೆ.

ನಂತರ ಈ ಪ್ರಕರಣದಲ್ಲಿ ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ, ಇವರು ವಿಚಾರಣಾ ವರದಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸಿ, ಆರೋಪಿಗಳ ವಿರುದ್ಧ ನ್ಯಾಯಾಲಯಕ್ಕೆ ದೋಷರೋಪಣಾ ಪಟ್ಟಿ ಸಲ್ಲಿಸಲು ಅನುಮತಿಯನ್ನು ಮತ್ತು ವಾಹನ, ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ನಂತರ ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಟ್ ಈ ನ್ಯಾಯಾಲಯಕ್ಕೆ ಒದಗಿಸಲು ಸಹಾಯಕ ಪ್ರಾದೇಶಿಕ ಸಾರಿಗೆ, ಅಧಿಕಾರಿ ಸಾಗರ ಇವರಿಗೆ ಈ ನ್ಯಾಯಾಲಯದ ಪತ್ರ ಸಂ : ಬಿ3.ಅಮೊ.ವಾಹನ.ಸಿಆರ್.04/10–11ನ್ನು ದಿನಾಂಕ : 03–06–2010, 01–10–2010ರಂದು ಬರೆದು ಕೋರಲಾಯಿತು. ಅದರಂತೆ ಸಾಗರ ಸಾರಿಗೆ ಅಧಿಕಾರಿಯು ಈ ವಾಹನದ 'ಬಿ' ಎಕ್ಸ್‌ಟ್ರ್ಯಾಕ್ಸ್‌ನ್ನು ದಿನಾಂಕ : 07–03–2011 ರಂದು ಈ ನ್ಯಾಯಾಲಯಕ್ಕೆ ಒದಗಿಸಿರುತ್ತಾರೆ. ಈ 'ಬಿ' ಎಕ್ಸ್‌ಟ್ರ್ಯಾಕ್ಸ್‌ನಲ್ಲಿ ನಮೂದಿಸಿದ ಆರ್.ಸಿ. ಮಾಲೀಕರ ಹೆಸರು ಶ್ರೀ ದೇವರಾಜ್ ಬಿನ್ ಭೀಮಪ್ಪ, ಬೀಡಿ ಕ್ವಾರ್ಟಸ್, 4ನೇ ಕ್ರಾಸ್, ಸಾಗರ ಇವರಿಗೆ ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಬಿ)(1)ರ ಪ್ರಕಾರ ಈ ವಾಹನದ ದಾಖಲೆಗಳನ್ನು ಈ ನ್ಯಾಯಾಲಯಕ್ಕೆ ಈ ನೋಟಿಸ್ ತಲುಪಿದ 30 ದಿನಗಳೊಳಗಾಗಿ ಹಾಜರ್ಪಡಿಸಲು, ಒಂದು ವೇಳೆ ನಿಗದಿತ ಸಮಯದೊಳಗೆ ದಾಖಲೆಗಳನ್ನು ಹಾಜರ್ಪಡಿಸದೇ ಹೋದಲ್ಲಿ ವಾಹನ ಮತ್ತು ವಾಹನದಲ್ಲಿದ್ದ ಅರಣ್ಯ ಉತ್ಪನ್ನವನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದೆಂದು ದಿನಾಂಕ : 11–03–2011ರಂದು ನೊಂದಣಿ ಅಂಚೆ ಮೂಲಕ ನೋಟಿಸ್ ಜಾರಿ ಮಾಡಿದ ಲಕೋಟೆ ಮೇಲೆ ಅಂಚೆ ಇಲಾಖೆಯವರು (Not known) ಎಂದು ನಮೂದಿಸಿ ಹಿಂದಿರುಗಿಸಿರುತ್ತಾರೆ. ಪುನಃ ವಲಯ ಅರಣ್ಯ ಅಧಿಕಾರಿ ಅಂಬ್ಲಿಗೋಳ ವಲಯ ಇವರ ಮುಖಾಂತರ ಆರ್.ಸಿ. ಮಾಲೀಕರಿಗೆ ನೋಟಿಸ್ ಜಾರಿ ಮಾಡಲಾಗಿದೆ.

ಈ ನಡುವೆ ಈ ವಾಹನದ ಬಗ್ಗೆ ಹೆಚ್ಚಿನ ಪ್ರಚಾರಕ್ಕಾಗಿ ಈ ನ್ಯಾಯಾಲಯದಿಂದ 30 ದಿನಗಳ ಕಾಲಾವಕಾಶ ನೀಡಿ ಸಂಖ್ಯೆ : ಬಿ3 : ಅಮೊ : ವಾಹನ : ಸಿಆರ್ : 19/10–11/ದಿನಾಂಕ : 01–07–2010ರಂದು ಪ್ರಕಟಣೆಯನ್ನು ಹೊರಡಿಸಿ ಪ್ರತಿಯನ್ನು ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯ ಪತ್ರ ವಿಭಾಗ, ಸರ್ಕಾರಿ ಮುದ್ರಣಾಲಯ, ಬೆಂಗಳೂರು ಇವರಿಗೆ ಹಾಗೂ ನಿರ್ದೇಶಕರು, ವಾರ್ತಾ ಮತ್ತು ಪ್ರಚಾರ ಇಲಾಖೆ, ಬೆಂಗಳೂರು ಇವರಿಗೆ ಕಳುಹಿಸಿ ರಾಜ್ಯ ಮಟ್ಟದ ಪ್ರಚಲಿತ ದೈನಿಕ ಪತ್ರಿಕೆಯಲ್ಲಿ ಪ್ರಕಟಿಸಲು ಕೋರಲಾಗಿತ್ತು. ಅದರಂತೆ ಈ ಪ್ರಕಟಣೆಯು ದಿನಾಂಕ : 17–07–2010ರಂದು ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಮತ್ತು ದಿನಾಂಕ : 19–08–2010ರಂದು ರಾಜ್ಯ ಗೆಜೆಟ್ ಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರು ವಾಹನ ಮಾಲೀಕರಾಗಲೀ ಅಥವಾ ಅವರ ಪರ ವಕೀಲರಾಗಲೀ ಈ ನ್ಯಾಯಾಲಯಕ್ಕೆ ಹಕ್ಕುಬಾಧ್ಯತೆಯ ಅರ್ಜಿ ಸಲ್ಲಿಸಿರುವುದಿಲ್ಲ.

ಸಹಾಯಕ ಸರ್ಕಾರಿ ಅಭಿಯೋಜಕರು ದಿನಾಂಕ : 19–05–2012 ರಂದು ವಾದ ಮಂಡಿಸಿ, ಸದರಿ ವಾಹನದಲ್ಲಿ ಅರಣ್ಯ ಉತ್ಪನ್ನವನ್ನು ಸಾಗಿಸುತ್ತಿರುವಾಗ ಮಾಲು ಸಹಿತ ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ, ಇವರು ವಾಹನವನ್ನು ಜಪ್ತುಮಾಡಿ ಮಹಜರ್ ಪ್ರತಿ ಪ್ರಥಮ ವರ್ತಮಾನ ವರದಿ ಮತ್ತು ಜಪ್ತಿ ವರದಿಯನ್ನು ವಲಯ ಅರಣ್ಯ ಅಧಿಕಾರಿ ಅಂಬ್ಲಿಗೋಳ ವಲಯ ಇವರು ಈ ನ್ಯಾಯಾಲಯಕ್ಕೆ ಹಾಜರ್ಪಡಿಸಿರುವುದರಿಂದ ಈ ವಾಹನದಲ್ಲಿ ಬೀಟೆ ತುಂಡುಗಳನ್ನು ಅಕ್ರಮವಾಗಿ ಸಾಗಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲು ಕೋರಿರುತ್ತಾರೆ.

ಈ ಪ್ರಕರಣದ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ, ಅಭಿಯೋಜಕರ ವಾದವನ್ನು ಕೇಳಿದೆ. ಹಾಗೂ ಈ ವಾಹನದ ಬಗ್ಗೆ ಪತ್ರಿಕಾ ಪ್ರಕಟಣೆ ಹೊರಡಿಸಿರುತ್ತದೆ. ಈ ಪ್ರಕಟಣೆಯು ಈ ರಾಜ್ಯ ಗೆಜೆಟ್‌ನಲ್ಲಿ ಮತ್ತು ದಿನಪತ್ರಿಕೆಯಲ್ಲಿ ಪ್ರಕಟಗೊಂಡು 30 ದಿನಗಳಾದರೂ ಯಾರೂ ಹಕ್ಕು ಬಾಧ್ಯತೆಯ ಅರ್ಜಿಯನ್ನು ಈ ನ್ಯಾಯಾಲಯಕ್ಕೆ ಸಲ್ಲಿಸದೇ ಇದ್ದುದರಿಂದ ಈ ಪ್ರಕರಣದ ವಿದ್ಯಾಮಾನಗಳನ್ನು ಅರಿತು ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಆದೇಶ**

ಮೇಲ್ಕಂಡ ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಆರ್. ರವಿಶಂಕರ್, ಅಧಿಕೃತ, ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಆದ ನಾನು, ಕರ್ನಾಟಕ ಅರಣ್ಯ ಕಾಯಿದೆ 1963 ಸೆಕ್ಷನ್ 71(ಎ) ರಿಂದ (ಜಿ) ಪ್ರಕಾರ ವಲಯ ಅರಣ್ಯಾಧಿಕಾರಿ, ಅಂಬ್ಲಿಗೊಳ ವಲಯ, ಇವರು ಜಪ್ತು ಮಾಡಿದ ವಾಹನ ಲಗೇಜ್ ಆಟೋ ಕೆಎ–15–4883 (ಛಾಸ್ಸಿಸ್ ನಂ. MD-2-ALAL-ZZ-PUC-12199, ಇಂಜಿನ್ ನಂ. BBM-BPG-18215)ನ್ನು ಮತ್ತು ಬೀಟೆ ನಾಟಾ 36=0.154ಎಂ3 ಯನ್ನು ಅಂತಿಮವಾಗಿ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡಿರುತ್ತೇನೆ. ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅರಣ್ಯ ಉತ್ಪನ್ನವನ್ನು ಸರ್ಕಾರಕ್ಕೆ ಅನುಕೂಲಕರವಾಗಿ ವಿಲೇ ಮಾಡಲು ಆದೇಶಿಸಿದ್ದೇನೆ. ಈ ಆದೇಶವನ್ನು ಹೇಳಿ ಬರೆಯಿಸಿ, ಗಣಕಯಂತ್ರದಲ್ಲಿ ಮುದ್ರಿಸಿ, ನಂತರ ಸರಿಪಡಿಸಿ ದಿನಾಂಕ : 16–06–2012ರಂದು ನನ್ನ ಸಹಿ ಹಾಗೂ ಮೊಹರಿನೊಂದಿಗೆ ತೆರೆದ ನ್ಯಾಯಾಲಯದಲ್ಲಿ ಆದೇಶಿಸಿದ್ದೇನೆ.; ಈ ಆದೇಶ ಹೊರಡಿಸಿದ 30 (ಮೂವತ್ತು) ದಿನಗಳ ಒಳಗಾಗಿ ಯಾರು ಮೇಲ್ಮನವಿ ಸಲ್ಲಿಸದೇ ಹೋದಲ್ಲಿ ಇದೇ ಅಂತಿಮ ಆದೇಶವಾಗಿರುತ್ತದೆ.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಸಾಗರ ವಿಭಾಗ, ಸಾಗರ.

**ಪಿ.ಆರ್. 885**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ : ಆಕುಕ 62 ಹೆಚ್‌ಎಸ್‌ಜಿ 2011, ಬೆಂಗಳೂರು, ದಿನಾಂಕ : 03–07–2012**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿನ ಜಂಟಿ ನಿರ್ದೇಶಕರ ಅಂತಿಮ ಜ್ಯೇಷ್ಠತಾ ಪಟ್ಟಿಯನ್ನು ದಿನಾಂಕ : 01–01–2009 ರಲ್ಲಿದ್ದಂತೆ ಸರ್ಕಾರದ ಅಧಿಸೂಚನೆ ಸಂಖ್ಯೆ : ಆಕುಕ 40 ಎಂಎಸ್‌ಎಸ್ 2009 ದಿನಾಂಕ : 22–11–2010ರಲ್ಲಿ ಪ್ರಕಟಿಸಲಾಗಿತ್ತು. ಮುಂದುವರಿದು, ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ : 7478/2011ರಲ್ಲಿ ಡಾ॥ ಹೀರಾ ಬಿ. ರಾಯ್ಕರ್ ಸಲ್ಲಿಸಿದ್ದ ರಿಟ್ ಅರ್ಜಿಯ ಹಿನ್ನೆಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ ; ಆಕುಕ 62 ಹೆಚ್‌ಎಸ್‌ಜಿ 2011 ದಿನಾಂಕ : 28–05–2012ರಲ್ಲಿ ಜಂಟಿ ನಿರ್ದೇಶಕರ ವೃಂದದಲ್ಲಿ ದಿನಾಂಕ : 27–05–2008 ಮತ್ತು 03–11–2008ರಂದು ನೀಡಿದ ಮನವಿಗಳನ್ನು ಪರಾಮರ್ಶಿಸಿ, ಜಂಟಿ ನಿರ್ದೇಶಕರ ವೃಂದಕ್ಕೆ ನೀಡಿದ್ದ ಮುಂಬಡ್ತಿ ದಿನಾಂಕಗಳನ್ನು ಪರಿಷ್ಕರಿಸಿ ಆದೇಶ ಹೊರಡಿಸಲಾಗಿದೆ.

ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಮೇಲೆ ತಿಳಿಸಿದ ರಿಟ್ ಅರ್ಜಿಯಲ್ಲಿ ದಿನಾಂಕ : 11–04–2011ರಂದು ನೀಡಿರುವ ತೀರ್ಪಿನಲ್ಲಿ ಅಪರ ನಿರ್ದೇಶಕರ ವೃಂದದಲ್ಲಿಯೂ ಸಹ ಅರ್ಜಿದಾರರಾದ ಡಾ॥ ಹೀರಾ ಬಿ. ರಾಯ್ಕರ್ ಇವರ ಮುಂಬಡ್ತಿಯನ್ನು ಪರಾಮರ್ಶಿಸಿ, ಜ್ಯೇಷ್ಠತೆಯನ್ನು ನಿಗದಿಪಡಿಸಲು ನಿರ್ದೇಶನ ನೀಡಿದೆ.

ಮಾನ್ಯ ಆಡಳಿತ ನ್ಯಾಯ ಮಂಡಳಿಯು ಮೇಲ್ಕಂಡ ತೀರ್ಪಿನನ್ವಯ, ಸರ್ಕಾರವು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಅಪರ ನಿರ್ದೇಶಕರ ವೃಂದದಲ್ಲಿ ದಿನಾಂಕ ; 01–08–2010 ರಲ್ಲಿದ್ದಂತೆ ನೀಡಲಾಗಿರುವ ಮುಂಬಡ್ತಿಗಳನ್ನು ಪರಾಮರ್ಶಿಸಿದೆ. ಅದರಂತೆ ಅಪರ ನಿರ್ದೇಶಕರ ವೃಂದದಲ್ಲಿ ತಯಾರಿಸಿದ ಜೇಷ್ಠತಾ ಪಟ್ಟಿಯನ್ನು ಈ ಅಧಿಸೂಚನೆಗೆ ಲಗತ್ತಿಸಿರುವ ಅನುಬಂಧದಲ್ಲಿ ಪ್ರಕಟಿಸಲಾಗಿದೆ. ಸದರಿ ಜ್ಯೇಷ್ಠತಾ ಪಟ್ಟಿಯ ಕುರಿತಂತೆ ಆಕ್ಷೇಪಣೆ/ಸಲಹೆಗಳು ಯಾವುದಾದರೂ ಇದ್ದಲ್ಲಿ ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಸರ್ಕಾರದ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರಿಗೆ ಸಲ್ಲಿಸಲು ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಿಕ್ಕೇಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು)

**ಸರ್ಕಾರದ ಅಧಿಸೂಚನೆ ಸಂಖ್ಯೆ : ಆಕುಕ 62 ಹೆಚ್‌ಎಸ್‌ಜಿ 2011 ದಿನಾಂಕ : 03–07–2012 ಕ್ಕೆ ಅನುಬಂಧ**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಅಪರ ನಿರ್ದೇಶಕರ ವೃಂದದಲ್ಲಿ ದಿನಾಂಕ : 01–08–2010 ರಲ್ಲಿದ್ದಂತೆ ನೀಡಲಾಗಿರುವ ಮುಂಬಡ್ತಿಗಳನ್ನು ಪರಾಮರ್ಶಿಸಿ ಕೆಳಕಂಡಂತೆ ಮುಂಬಡ್ತಿ ದಿನಾಂಕಗಳನ್ನು ಪರಿಷ್ಕರಿಸಿದೆ.

| ಕ್ರ. ಸಂ. | ಹೆಸರು | ಜನ್ಮ ದಿನಾಂಕ | ಅಪರ ನಿರ್ದೇಶಕರ ವೃಂದದಲ್ಲಿ ವಾಸ್ತವವಾಗಿ ಮುಂಬಡ್ತಿ ಪಡೆದ ದಿನಾಂಕ | ಪರಾಮರ್ಶಿಸಿದ ನಂತರ ಅಪರ ನಿರ್ದೇಶಕರ ವೃಂದದಲ್ಲಿ ಅಂತಿಮವಾಗಿ ನಿಗದಿಪಡಿಸಿದ ಅರ್ಹತಾ ದಿನಾಂಕ | ಷರಾ |
|---|---|---|---|---|---|
| **1** | **2** | **3** | **4** | **5** | **6** |
| ದಿನಾಂಕ : 01–08–2010ರಲ್ಲಿದ್ದಂತೆ ಎಲ್ಲಾ ಅಪರ ನಿರ್ದೇಶಕರ ಹುದ್ದೆಗಳು ಭರ್ತಿಯಾಗಿತ್ತು. | | | | | |
| 1. | ಡಾ॥ ಕೆ. ಎಂ. ಪ್ರೇಮ | 26–12–1950 | – | 26–08–2010 | ಡಾ॥ ಸುಮೇಧಾ ದೇಸಾಯಿ ಇವರ ಮುಂಬಡ್ತಿಯಿಂದ ದಿನಾಂಕ: 25–08–2010ರಂದು ತೆರವಾದ ಹುದ್ದೆ. |
| 2. | ಡಾ॥ ಸಿ. ಆರ್. ಅನ್ನಪೂರ್ಣ | 24–08–1951 | – | – | ಇವರು ದಿನಾಂಕ : 24–12–2008ರಂದು ಸ್ವ–ಇಚ್ಛಾ ನಿವೃತ್ತಿ ಪಡೆದಿರುತ್ತಾರೆ. |
| 3. | ಡಾ॥ ವಿ. ದಿನಮಣಿ | 19–08–1950 | – | 26–08–2010 | ಡಾ॥ ಉಷಾ ವಾಸನ್ಕರ್ ರವರ ಮುಂಬಡ್ತಿಯಿಂದ ದಿನಾಂಕ : 25–08–2010ರಂದು ತೆರವಾದ ಹುದ್ದೆ. |
| 4. | ಡಾ॥ ವಿನುತ | 20–06–1950 | – | – | ದಿನಾಂಕ : 30–06–2008 ರಂದು ವಯೋನಿವೃತ್ತಿ ಹೊಂದಿರುತ್ತಾರೆ. |
| 5. | ಡಾ॥ ಹೀರಾ ಬಿ. ರಾಯ್ಕರ್ | 01–06–1952 | 31–05–2011 | 10–09–2010 | ಡಾ॥ ಚಂದ್ರಶೇಖರ ನಾಯಕ್ ರವರ ದಿನಾಂಕ : 09–09–2010ರ ಮುಂಬಡ್ತಿಯಿಂದ ತೆರವಾದ ಹುದ್ದೆ. |
| 6. | ಡಾ॥ ಅರುಣಾ ರುದ್ರಪ್ಪ | 24–04–1952 | – | – | ಮುಚ್ಚಿದ ಲಕೋಟೆಯಲ್ಲಿದ್ದ ಅವಧಿಯಲ್ಲಿಯೇ ವಯೋನಿವೃತ್ತಿ ಹೊಂದಿರುತ್ತಾರೆ. |
| 7. | ಡಾ॥ ಟಿ. ಎಸ್. ಚಲುವರಾಜು | 06–08–1952 | 31–05–2011 | 01–01–2011 | ಡಾ॥ ಮೋಹನ್‌ರಾಜು ರವರ ದಿನಾಂಕ : 31–12–2010ರ ವಯೋನಿವೃತ್ತಿಯಿಂದ ತೆರವಾದ ಹುದ್ದೆ. |

**ಚಿಕ್ಕೇಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು)

**ಪಿ.ಆರ್. 916**

## ಕಾನೂನು ಮಾಪನಶಾಸ್ತ್ರ ನಿಯಂತ್ರಕರು, ಬೆಂಗಳೂರುರವರ ನಡವಳಿಗಳು

**ವಿಷಯ:** ಶ್ರೀ ಕೆ. ಪ್ರಸನ್ನ ದ್ವಿತೀಯ ದರ್ಜೆ ಸಹಾಯಕರು, ಇವರ ಮೇಲಿನ ಶಿಸ್ತು ಕ್ರಮ ನಡವಳಿಕೆಯ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:** 1) ನೌಕರರಿಗೆ ದೋಷಾರೋಪಣಾ ಪಟ್ಟಿ ಜಾರಿ ಮಾಡಿದ ಈ ಕಛೇರಿ ಸೂಚನಾ ಪತ್ರ ಸಂಖ್ಯೆ : ಕಾಮಾಇ/ ಸಿಬ್ಬಂದಿ–2/ಸಿಆರ್–41/09–10, ದಿನಾಂಕ 25–11–2009.

2) ವಿಚಾರಣಾಧಿಕಾರಿಗಳ ನೇಮಕಾತಿ ಆದೇಶ ಸಂಖ್ಯೆ : ಕಾಮಾಇ/ಸಿಬ್ಬಂದಿ–2/ಸಿಆರ್–41–10–11, ದಿನಾಂಕ : 02–08–2010.

3) ಉಪ ನಿಯಂತ್ರಕರು ಬೆಂಗಳೂರು ಜಿಲ್ಲೆ, ಬೆಂಗಳೂರು ಹಾಗೂ ವಿಚಾರಣಾಧಿಕಾರಿಗಳವರು ಸಲ್ಲಿಸಿದ ವಿಚಾರಣಾ ವರದಿ ಸಂಖ್ಯೆ : ಕಾಮಾಉನಿಬೆಂಜಿ/ನಿವರದಿ/16/11–12, ದಿನಾಂಕ 26–08–2011.

4) ನೌಕರರಿಗೆ ವಿಚಾರಣಾ ವರದಿ ಜಾರಿ ಮಾಡಲು ನೌಕರರ ಮನೆ ವಿಳಾಸ ಲಭ್ಯವಿಲ್ಲದ ಕಾರಣ ಪತ್ರಿಕೆಯಲ್ಲಿ ಪತ್ರಿಕಾ ಪ್ರಕಟಣೆ ಹೊರಡಿಸಿದ ಸಂಖ್ಯೆ : ಕಾಮಾಇ/ಸಿಬ್ಬಂದಿ–2/ಸಿಆರ್–41/09–10, ದಿನಾಂಕ : 19–01–2012 ಪತ್ರಿಕೆಯಲ್ಲಿ ಪ್ರಕಟಣೆಗೊಂಡ ದಿನಾಂಕ 31–1–2012.

5) ಸರ್ಕಾರದ ಸುತ್ತೋಲೆ ಸಂಖ್ಯೆ : ಸಿಆಸುಇ /18 ಸೇ ಇವಿ/2001, ದಿನಾಂಕ 14–09–2001.

**ಪ್ರಸ್ತಾವನೆ:**

ಶ್ರೀ ಕೆ. ಪ್ರಸನ್ನ ದ್ವಿತೀಯ ದರ್ಜೆ ಸಹಾಯಕರು, ಉಪ ನಿಯಂತ್ರಕರ ಕಛೇರಿ, ಬೆಳಗಾಂ (ಸಹಾಯಕ ನಿಯಂತ್ರಕರು, ದಾವಣಗೆರೆ ಕಛೇರಿಯಲ್ಲಿ ಕಾರ್ಯ ವ್ಯವಸ್ಥೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದು) ಇವರು ದಿನಾಂಕ 19–01–2009 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿ ಕರ್ತವ್ಯಕ್ಕೆ ಅಡಚಣೆ ಉಂಟು ಮಾಡಿದ ಸಂಬಂಧ ಉಲ್ಲೇಖ (1) ರಲ್ಲಿ ನೌಕರರ ಮೇಲೆ ಆರೋಪ ಹೊರಿಸಿ ದೋಷಾರೋಪಣಾ ಪಟ್ಟಿಯನ್ನು ನೋಂದಣಿ ಅಂಚೆ ಮೂಲಕ ಜಾರಿ ಮಾಡಲಾಗಿತ್ತು. ಆದರೆ ಆರೋಪಿತ ನೌಕರರು ವಾಸಿಸುವ ವಿಳಾಸ ಲಭ್ಯವಿಲ್ಲದೇ ಸದರಿ ಪತ್ರವು ವಾಪಸ್ಸು ಬಂದಿರುತ್ತದೆ. ಈ ಹಿನ್ನೆಲೆಯಲ್ಲಿ ನೌಕರರ ಆರೋಪದ ಬಗ್ಗೆ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ದೃಷ್ಟಿಯಿಂದ ನೌಕರರ ಮೇಲಿನ ಆರೋಪಗಳ ಸಂಬಂಧ ವಿಚಾರಣೆ ನಡೆಸಲು ತೀರ್ಮಾನಿಸಿ, ಉಲ್ಲೇಖ (2) ರನ್ವಯ ಈ ಕಛೇರಿಯ ಆದೇಶ ಸಂಖ್ಯೆ : ಕಾಮಾಇ : ಸಿಬ್ಬಂದಿ–2 : ಸಿಆರ್–41 : 09–10, ದಿನಾಂಕ 02–08–2010 ರಲ್ಲಿ ಶ್ರೀ ಪಿ.ವಿ. ಮನೋಹರನ್, ಉಪ ನಿಯಂತ್ರಕರು, ಬೆಂಗಳೂರು ಜಿಲ್ಲೆ, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಕ ಮಾಡಿ ವಿಚಾರಣೆ ನಡೆಸಿ ವರದಿ ಸಲ್ಲಿಸುವಂತೆ ತಿಳಿಸಲಾಯಿತು. ವಿಚಾರಣಾಧಿಕಾರಿಗಳು ಆಪಾದಿತ ನೌಕರರಿಗೆ ವಿಚಾರಣೆಗೆ ಹಾಜರಾಗಿ ಆರೋಪಗಳ ಬಗ್ಗೆ ಪ್ರತಿವಾದ ಮಂಡಿಸಲು ಹಲವಾರು ಬಾರಿ ನೋಟಿಸ್ ನೀಡಿದ್ದರೂ ಆರೋಪಿತ ನೌಕರರು ನೋಟಿಸ್‌ಗಳನ್ನು ಸ್ವೀಕರಿಸಿರುವುದಿಲ್ಲ. ಹಾಗೂ ವಿಚಾರಣೆಗೂ ಸಹ ಗೈರು ಹಾಜರಾಗಿರುತ್ತಾರೆ. ಆರೋಪಿತ ನೌಕರರು ವಿಚಾರಣೆಗೆ ಹಾಜರಾಗದ ಕಾರಣ ನಿಯಮಾನುಸಾರ ಏಕ ಪಕ್ಷೀಯವಾಗಿ ವಿಚಾರಣೆ ನಡೆಸಿ ವಿಚಾರಣಾ ವರದಿಯನ್ನು ಉಲ್ಲೇಖ (3) ರಲ್ಲಿ ಸಲ್ಲಿಸಿರುತ್ತಾರೆ. ವಿಚಾರಣಾಧಿಕಾರಿಗಳು ವಿಚಾರಣಾ ವರದಿಯಲ್ಲಿ ಆರೋಪಿತ ನೌಕರರು ದಿನಾಂಕ 19–01–2009 ರಿಂದ ಗೈರು ಹಾಜರಾಗಿರುವುದು ದೃಢಪಟ್ಟಿದ್ದು, ಆರೋಪವು ಸಾಬೀತಾಗಿರುತ್ತದೆ ಎಂದು ತಿಳಿಸಿರುತ್ತಾರೆ. ಆಪಾದಿತ ನೌಕರರ ಮೇಲೆ ಹೊರಿಸಲಾದ ಆರೋಪಗಳು ವಿಚಾರಣಾ ವರದಿಯ ಪ್ರಕಾರ ಸಾಬೀತಾಗಿರುವ ಹಿನ್ನೆಲೆಯಲ್ಲಿ ಸದರಿ ವಿಚಾರಣಾ ವರದಿಯ ಬಗ್ಗೆ ಆಪಾದಿತ ನೌಕರರ ಆಕ್ಷೇಪಣೆ ಬಗ್ಗೆ ಏನಾದರೂ ಇದ್ದಲ್ಲಿ ತಿಳಿಸಲು ಅವಕಾಶ ಮಾಡಿಕೊಡುವ ಉದ್ದೇಶದಿಂದ ಪತ್ರಿಕೆಯಲ್ಲಿ ಪ್ರಕಟಣೆ ಹೊರಡಿಸಿದ 15 ದಿನದೊಳಗಾಗಿ ಅಹವಾಲು ಸಲ್ಲಿಸುವಂತೆ ಹಾಗೂ ಯಾವುದೇ ಹೇಳಿಕೆ/ಅಭಿಪ್ರಾಯ ನೀಡದೇ ಇದ್ದಲ್ಲಿ ಮುಂದಿನ ಕ್ರಮ ಜರುಗಿಸಲಾಗುವುದೆಂದು ಉಲ್ಲೇಖ (4) ರಲ್ಲಿ ತಿಳಿಸಲಾಗಿತ್ತು. ಆದಾಗ್ಯೂ ಆಪಾದಿತ ನೌಕರರು ಯಾವುದೇ ಪ್ರತಿವಾದದ ಉತ್ತರ ನೀಡಿರುವುದಿಲ್ಲ ಅಥವಾ ಖುದ್ದು ಹಾಜರಾಗಿರುವುದಿಲ್ಲ. ಆಪಾದಿತ ನೌಕರರಿಂದ ಯಾವುದೇ ಉತ್ತರ ಬಾರದಿದ್ದ ಕಾರಣ ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ.) ನಿಯಮಗಳನ್ವಯ ಅಂತಿಮ ಆದೇಶ ಜಾರಿಗೊಳಿಸುವ ಸಂಬಂಧ ಪ್ರಸ್ತುತ ಪ್ರಕರಣದಲ್ಲಿನ ವಿಚಾರಣಾಧಿಕಾರಿಗಳು ಸಲ್ಲಿಸಿರುವ ವಿಚಾರಣಾ ವರದಿ ಹಾಗೂ ವಿಷಯಕ್ಕೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಯಿತು. ಆಪಾದಿತ ನೌಕರನ ಮೇಲೆ ಹೊರಿಸಿದ ಆರೋಪವು ಸಂಪೂರ್ಣ ಸಾಬೀತಾಗಿರುವುದಾಗಿ ವಿಚಾರಣಾಧಿಕಾರಿಗಳು ವರದಿ ಮಾಡಿರುತ್ತಾರೆ. ಆಪಾದಿತ ನೌಕರನು 4 ತಿಂಗಳಿಗೂ ಮೀರಿ ಅನಧಿಕೃತ ಗೈರು ಹಾಜರಾಗಿರುವುದು ರುಜುಬಾತಾಗಿರುತ್ತದೆ. ಮುಂದುವರಿದು ಆಪಾದಿತ ನೌಕರರಿಗೆ ಸಾಕಷ್ಟು ಕಾಲಾವಕಾಶ ನೀಡಿದ್ದರೂ ನೀಡಿದ ಅವಕಾಶವನ್ನು ಉಪಯೋಗಿಸಿಕೊಂಡು ಅಹವಾಲು ಸಲ್ಲಿಸಿರುವುದಿಲ್ಲ. ಈ ರೀತಿಯಾಗಿ ನೌಕರರು 4 ತಿಂಗಳಿಗೂ ಮೀರಿ ಅನಧಿಕೃತವಾಗಿ ಕರ್ತವ್ಯಕ್ಕೆ ಗೈರು ಹಾಜರಾಗಿರುವುದು ವಿಚಾರಣೆಯಲ್ಲಿ ರುಜುವಾತಾಗಿರುವುದರಿಂದ ಸರ್ಕಾರದ ಸುತ್ತೋಲೆ ಸಂಖ್ಯೆ : ಸಿಆಸುಇ : 18 ಸೇಇ 2001, ದಿನಾಂಕ 11.09.2001 ರಲ್ಲಿನ ಸೂಚನೆಗಳನ್ವಯ 4 ತಿಂಗಳಿಗೂ ಮೀರಿ ಅನಧಿಕೃತ ಗೈರು ಹಾಜರಾಗುವ ನೌಕರರನ್ನು ಸೇವೆಯಿಂದ ತೆಗೆದು ಹಾಕುವ ದಂಡನೆಯನ್ನು ವಿಧಿಸುವುದು ಸೂಕ್ತ ಎಂದು ತಿಳಿಸಲಾಗಿದ್ದು ಅದರಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸಂಖ್ಯೆ: ಕಾಮಾಇ/ಸಿಬ್ಬಂದಿ-2/ಸಿಆರ್-41/09-10, ದಿನಾಂಕ 30-06-2012**

ಪ್ರಸ್ತಾವನೆಯಲ್ಲಿ ವಿವರವಾಗಿ ವಿವರಿಸಿರುವಂತೆ ಶ್ರೀ ಕೆ. ಪ್ರಸನ್ನ ದ್ವಿತೀಯ ದರ್ಜೆ ಸಹಾಯಕರು, ಉಪ ನಿಯಂತ್ರಕರು, ಬೆಳಗಾಂ ಕಛೇರಿ, ಪ್ರಸ್ತುತ ಸಹಾಯಕ ನಿಯಂತ್ರಕರು, ದಾವಣಗೆರೆ ಕಛೇರಿಯಲ್ಲಿ ಕಾರ್ಯ ವ್ಯವಸ್ಥೆ ಮೇಲೆ ಕಾರ್ಯನಿರ್ವಹಿಸುತ್ತಿದ್ದ ಇವರು ದಿನಾಂಕ 19-01-2009 ರಿಂದ ಇಲ್ಲಿಯವರೆಗೂ ಅನಧಿಕೃತವಾಗಿ ಗೈರು ಹಾಜರಾಗಿರುವುದು ಮತ್ತು ಕರ್ತವ್ಯ ಲೋಪದ ಆರೋಪ ಸಾಭೀತಾಗಿರುವುದರಿಂದ ಶಿಸ್ತು ಪ್ರಾಧಿಕಾರ ಹಾಗೂ ಕಾನೂನು ಮಾಪನಶಾಸ್ತ್ರ ನಿಯಂತ್ರಕರಾದ ಶ್ರೀ ಜಿ.ಎಸ್. ನಾಯಿಕ್, ಆದ ನಾನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಮ ಮತ್ತು ಮೇಲ್ಮನವಿ) ನಿಯಮಗಳಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅದೇ ನಿಯಮಗಳ ನಿಯಮ 8(8)ರ ಪ್ರಕಾರ ಶ್ರೀ ಕೆ. ಪ್ರಸನ್ನ ದ್ವಿತೀಯ ದರ್ಜೆ ಸಹಾಯಕರು ಇವರನ್ನು ಪುನಃ ಸರ್ಕಾರಿ ನೌಕರಿಯ ಪ್ರವೇಶಕ್ಕೆ ಸಾಮಾನ್ಯವಾಗಿ ಅನರ್ಹತೆಯಾಗತಕ್ಕ ರೀತಿಯಲ್ಲಿ ಸರ್ಕಾರಿ ಸೇವೆಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ವಜಾ ಮಾಡಿ ಆದೇಶಿಸಿರುತ್ತೇನೆ.

ಉಪ ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಬೆಳಗಾವಿ, ಇವರು ಈ ಆದೇಶವನ್ನು ನೌಕರರ ಸೇವಾ ವಹಿಯಲ್ಲಿ ನಮೂದಿಸಿ ಮೇಲಿನ ಆದೇಶದಂತೆ ನಿಯಮಾನುಸಾರ ಅಗತ್ಯ ಕ್ರಮ ಕೈಗೊಳ್ಳಲು ತಿಳಿಸಿದೆ.

**ಜಿ.ಎಸ್. ನಾಯಿಕ್,**
ಕಾನೂನು ಮಾಪನಶಾಸ್ತ್ರ ನಿಯಂತ್ರಕರು ಹಾಗೂ
ಶಿಸ್ತು ಪ್ರಾಧಿಕಾರಿಗಳು.

**ಪಿ.ಆರ್. 1196**

**ಸಹಕಾರ ಸಂಘಗಳ ನಿಬಂಧಕರ ಕಛೇರಿ, ನಂ. 1, ಆಲಿಆಸ್ಕರ್ ರಸ್ತೆ, ಬೆಂಗಳೂರು-52**

**ಸಂಖ್ಯೆ : ಸಿಬ್ಬಂದಿ/14/ಇಸಿಎಸ್-1/2012-13, ದಿನಾಂಕ 26-06-2012**

**ವಿಷಯ:** ಸಹಕಾರ ಇಲಾಖೆಯಲ್ಲಿ ಖಾಲಿ ಇರುವ ಪ್ರಥಮ ದರ್ಜೆ ಸಹಾಯಕ ಹುದ್ದೆಗೆ ಆಯ್ಕೆಗೊಂಡ ಅಭ್ಯರ್ಥಿಗಳ ನೇಮಕಾತಿ-ಸ್ಥಳನಿಯುಕ್ತಿಗೊಳಿಸುವ ಕುರಿತು.

**ಉಲ್ಲೇಖ:** 1) ಸರ್ಕಾರದ ಪತ್ರ ಸಂಖ್ಯೆ : ಸಇ/191/ಎಸಸೇ/2010, ದಿನಾಂಕ 27-08-2010.

2) ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಇವರ ಪತ್ರ ಕ್ರಮಾಂಕ : ಇ(2) 7127-7177/2011-12/ಪಿಎಸ್‌ಸಿ, ದಿನಾಂಕ 30-12-2011 ರೊಂದಿಗಿನ ಅಧಿಸೂಚನೆ ಸಂಖ್ಯೆ : ಇ(2) 7123/2011-12/ಪಿಎಸ್‌ಸಿ/, ದಿನಾಂಕ 27-12-2011.

**ಆದೇಶ**

ಕರ್ನಾಟಕ ಲೋಕಸೇವಾ ಆಯೋಗ, ಬೆಂಗಳೂರು ಇವರಿಂದ ಉಲ್ಲೇಖ (2)ರ ಪತ್ರದ ಮೂಲಕ ಸಹಕಾರ ಇಲಾಖೆಗೆ ಪ್ರಥಮ ದರ್ಜೆ ಸಹಾಯಕರಾಗಿ ರೂ. 14550-350-15600-400-17200-450-19000-500-21000-600-24600-700-26700 ರ ವೇತನ ಶ್ರೇಣಿಯಲ್ಲಿ ಆಯ್ಕೆಗೊಂಡಿರುವ ಕೆಳಕಂಡ ಅಭ್ಯರ್ಥಿಗಳಿಗೆ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿನ ಷರತ್ತು ಮತ್ತು ನಿಬಂಧನೆಗಳಿಗೆ ಒಳಪಟ್ಟು ತಾತ್ಕಾಲಿಕವಾಗಿ ಈ ಕೂಡಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಅವರುಗಳ ಹೆಸರಿನ ಮುಂದೆ ನಮೂದಿಸಿರುವ ಕಛೇರಿಗೆ ನೇಮಕಾತಿ ಮಾಡಿ ಸ್ಥಳನಿಯುಕ್ತಿಗೊಳಿಸಿ ಆದೇಶಿಸಲಾಗಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಸ್ಥಳ ನಿಯುಕ್ತಿಗೊಳಿಸಿರುವ ಕಛೇರಿ |
|---|---|---|
| **1** | **2** | **3** |
| 1 | ಶ್ರೀ ಮಹದೇವ ಎಂ.ಎಸ್.<br>ನಂ. 5, ಮುಂಡೂರು, ಮುಂಡೂರು ಅಂಚೆ, ಕೆ.ಆರ್. ನಗರ, ಮೈಸೂರು ಜಿಲ್ಲೆ, ಮೈಸೂರು-571604. | ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು |
| 2 | ಶ್ರೀ ಗಿರೀಶ್ ಕೆ.ಸಿ.<br>ನಂ. 9, ಕುರಂಬಳ್ಳಿ, ಹೆದ್ದಾರಿಪುರ, ಹೊಸನಗರ, ಶಿವಮೊಗ್ಗ-577436 | ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಉತ್ತರ ಕನ್ನಡ ಜಿಲ್ಲೆ, ಕಾರವಾರ. |
| 3 | ಶ್ರೀಮತಿ ವನಿತ,<br>ಕೆರಾಫ್ ಸಿದ್ದಯ್ಯ, ನಂ. 251, ಕಾವೇರಿಪುರ, 2ನೇ ಮುಖ್ಯ ರಸ್ತೆ, 9ನೇ ಅಡ್ಡರಸ್ತೆ, ಕಾಮಾಕ್ಷಿಪಾಳ್ಯ, ಬೆಂಗಳೂರು-560 079 | ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು. |

ಈ ನೇಮಕಾತಿ ಕರ್ನಾಟಕ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ : 7006/11ರ ಪ್ರಕರಣಕ್ಕೆ ಸಂಬಂಧಿಸಿದಂತೆ ಮಾನ್ಯ ನ್ಯಾಯ ಮಂಡಳಿ ನೀಡುವ ಅಂತಿಮ ತೀರ್ಮಾನಕ್ಕೆ ಒಳಪಟ್ಟಿರುತ್ತದೆ.

ಅಭ್ಯರ್ಥಿಗಳು ಸರ್ಕಾರಿ ಸೇವೆಗೆ ನೇಮಕಾತಿ ಹೊಂದಲು ಯಾವುದೇ ಅನರ್ಹತೆ ಹೊಂದಿಲ್ಲದೇ ಇರುವ ಬಗ್ಗೆ ಪೋಲೀಸ್ ಪರಿಶೀಲನಾ ವರದಿ ಹಾಗೂ ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡು ನೇಮಕಾತಿ ಹೊಂದಿರುವ ಅಭ್ಯರ್ಥಿಗಳ ಜಾತಿ/ಸಿಂಧುತ್ವ ಪ್ರಮಾಣ ಪತ್ರವನ್ನು ಪಡೆಯಬೇಕಾಗಿದ್ದು, ಕ್ರ.ಸಂ.2 ರ ಅಭ್ಯರ್ಥಿಯ ದಾಖಲಾತಿಗಳು ಬರಬೇಕಾಗಿದ್ದು, ಇವರು ಈ ಕಛೇರಿಯಿಂದ ಪ್ರತ್ಯೇಕ ಆದೇಶ ಪಡೆದ ನಂತರವೇ ಸ್ಥಳನಿಯುಕ್ತಿಗೊಂಡ ಹುದ್ದೆಗೆ ಹಾಜರಾಗತಕ್ಕದ್ದು. ಒಂದು ವೇಳೆ, ಪೋಲೀಸ್ ವರದಿಯಲ್ಲಿ ಅನರ್ಹತೆ ಹೊಂದಿದ್ದಲ್ಲಿ ಅಥವಾ ಮೀಸಲಾತಿ ಪಡೆದಿರುವುದು ಅಕ್ರಮವೆಂದು ಸಾಬೀತಾದರೆ ಅಂತಹ ಅಭ್ಯರ್ಥಿಯ ನೇಮಕಾತಿಯು ತಕ್ಷಣವೇ ರದ್ದುಗೊಳ್ಳುತ್ತದೆ.

**ಅಭ್ಯರ್ಥಿಗಳು ಈ ನೇಮಕಾತಿ ಆದೇಶ ತಲುಪಿದ 15 ದಿನಗಳೊಳಗಾಗಿ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳತಕ್ಕದ್ದು. ತಪ್ಪಿದ್ದಲ್ಲಿ ನೇಮಕಾತಿ ರದ್ದಾಗುತ್ತದೆ.**

**ಎಸ್.ಜಿ. ಹೆಗಡೆ,**
ಸಹಕಾರ ಸಂಘಗಳ ನಿಬಂಧಕರು,
ಕರ್ನಾಟಕ ರಾಜ್ಯ ಬೆಂಗಳೂರು.

**ಸಹಕಾರ ಸಂಘಗಳ ನಿಬಂಧಕರ ಆದೇಶ ಸಂಖ್ಯೆ : ಸಿಬ್ಬಂದಿ/14/ಇಸಿಎಸ್-1/2012-13, ದಿನಾಂಕ : 26-06-2012**

**ನೇಮಕಾತಿಯ ಷರತ್ತುಗಳು ಮತ್ತು ನಿಬಂಧನೆಗಳು**

1. ಅಭ್ಯರ್ಥಿಗಳ ನೇಮಕಾತಿಯು ತಾತ್ಕಾಲಿಕವಾಗಿದ್ದು, ಅವರ ನೇಮಕಾತಿ ಹಾಗೂ ಸೇವಾ ಷರತ್ತುಗಳು ಆಗಿಂದಾಗ್ಗೆ ಜಾರಿಯಲ್ಲಿರುವ ಸರ್ಕಾರಿ ಆದೇಶಗಳು/ಹೊರಡಿಸಲ್ಪಡುವ ನಿಯಮಾವಳಿಗಳ ಅಧೀನಕ್ಕೆ ಒಳಪಟ್ಟಿರುತ್ತದೆ.

2. ನೇಮಕಾತಿ ಹೊಂದಿದ ಅಭ್ಯರ್ಥಿಗಳು ಕರ್ನಾಟಕ ನಾಗರೀಕ ಸೇವಾ (ಪರೀಕ್ಷಾರ್ಥ) ನಿಯಮಾವಳಿಯ ನಿಯಮ 1977 ರಲ್ಲಿನ ನಿಯಮಗಳಿಗೆ ಬದ್ಧರಾಗಿರುತ್ತಾರೆ.

3. ಮೀಸಲಾತಿ ಅಡಿಯಲ್ಲಿ ಆಯ್ಕೆಗೊಂಡು ನೇಮಕಾತಿ ಹೊಂದಿರುವ ಅಭ್ಯರ್ಥಿಗಳ ನೇಮಕಾತಿಯು ಸಂಬಂಧಪಟ್ಟ ಜಿಲ್ಲಾಧಿಕಾರಿಗಳು ನೀಡಿರುವ ಸಿಂಧುತ್ವ ಪ್ರಮಾಣ ಪತ್ರವನ್ನು ಹಾಜರುಪಡಿಸುವ ಷರತ್ತಿಗೆ ಒಳಪಟ್ಟಿರುತ್ತದೆ. ಒಂದು ವೇಳೆ ಮೀಸಲಾತಿ ಪಡೆದಿರುವುದು ಅಕ್ರಮವೆಂದು ಸಾಬೀತಾದರೆ ಅಂತಹ ಅಭ್ಯರ್ಥಿಯ ನೇಮಕಾತಿಯು ತಕ್ಷಣವೇ ರದ್ದುಗೊಳ್ಳುತ್ತದೆ ಹಾಗೂ ಅವರ ಮೇಲೆ ನಿಯಮಾವಳಿಗಳ ಪ್ರಕಾರ ಕಠಿಣ ಕಾನೂನು ಕ್ರಮ ಕೈಗೊಳ್ಳಲಾಗುತ್ತದೆ.

4. ಅಭ್ಯರ್ಥಿಯು ಹುದ್ದೆಗೆ ಹಾಜರಾಗಲು ಯಾವುದೇ ರೀತಿಯ ಪ್ರಯಾಣಭತ್ಯೆ ನೀಡಲಾಗುವುದಿಲ್ಲ.

5. ಅಭ್ಯರ್ಥಿಯು ಹುದ್ದೆಗೆ ಹಾಜರಾಗುವ ಸಮಯದಲ್ಲಿ ಕಛೇರಿ ಮುಖ್ಯಸ್ಥರ ಮುಂದೆ ಈ ಕೆಳಕಾಣಿಸಿದ ನಮೂನೆಯಲ್ಲಿ ನಿಷ್ಠೆಯ ಪ್ರಮಾಣವನ್ನು ಮಾಡತಕ್ಕದ್ದು.

   "ಶ್ರೀ/ಶ್ರೀಮತಿ/ಕುಮಾರಿ . . . . . . . . . . . ಎಂಬ ಹೆಸರಿನವನಾದ/ಹೆಸರಿನವಳಾದ ನಾನು ಪ್ರಜ್ಞೆ, ಅರ್ಪಣೆ ಮನೋಭಾವ ಮತ್ತು ವಿಶ್ವಾಸದಿಂದ ಕೆಲಸ ಮಾಡುತ್ತೇನೆಂದೂ, ಭಾರತಕ್ಕೆ ಮತ್ತು ಭಾರತದ ಸಂವಿಧಾನಕ್ಕೆ ಸತ್ಯವಾಗಿ ನಿಷ್ಠನಾಗಿರುತ್ತೇನೆಂದೂ, ಭಾರತದ ಸಾರ್ವಭೌಮತ್ವ ಮತ್ತು ಅಖಂಡತೆಯನ್ನು ಎತ್ತಿ ಹಿಡಿಯುತ್ತೇನೆಂದೂ ಮತ್ತು ನನ್ನ ಕರ್ತವ್ಯಗಳನ್ನು ನಿಷ್ಠೆಯಿಂದ, ಪ್ರಾಮಾಣಿಕತೆಯಿಂದ ಮತ್ತು ನಿಷ್ಪಕ್ಷಪಾತವಾದ ರೀತಿಯಲ್ಲಿ ನಿರ್ವಹಿಸುತ್ತೇನೆಂದೂ, ಈ ಮೂಲಕ ಶಪಥ ಮಾಡುತ್ತೇನೆ. ಶ್ರದ್ಧಾಪೂರ್ವಕವಾಗಿ ದೃಢೀಕರಿಸುತ್ತೇನೆ. ಅದಕ್ಕೆ ಭಗವಂತನು ನನಗೆ ಸಹಾಯ ಮಾಡಲಿ."

6. ಅಭ್ಯರ್ಥಿಯನ್ನು ತಾತ್ಕಾಲಿಕವಾಗಿ ಪರಿವೀಕ್ಷಣೆಯ ಮೇಲೆ ನೇಮಕ ಮಾಡಿದೆ. ಇವರು ಹುದ್ದೆಗೆ ಹಾಜರಾದ ದಿನಾಂಕದಿಂದ ಎರಡು ವರ್ಷಗಳ ಕಾಲ ಅರ್ಹತಾ ಪರೀಕ್ಷಾವಧಿಯಲ್ಲಿರುತ್ತಾರೆ (ಪ್ರೊಬೇಷನ್) ಈ ಅವಧಿಯಲ್ಲಿ ಇವರು ಹುದ್ದೆಗೆ ನಿಗದಿಪಡಿಸಲಾದ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗತಕ್ಕದ್ದು.

7. ಅರ್ಹತಾ ಪರೀಕ್ಷಾವಧಿಯಲ್ಲಿ ನೌಕರರ ಕರ್ತವ್ಯ ನಿರ್ವಹಣೆ, ಹಾಜರಾತಿ ಶಿಸ್ತು ಮತ್ತು ನಡತೆ ತೃಪ್ತಿಕರವಾಗಿರದೇ ಇದ್ದಲ್ಲಿ ಯಾವುದೇ ಮುನ್ಸೂಚನೆಯನ್ನು ನೀಡದೆ ನೇಮಕಾತಿಯನ್ನು ಕೊನೆಗೊಳಿಸಲಾಗುವುದು. ಅಭ್ಯರ್ಥಿಯು ತೃಪ್ತಿಕರವಾಗಿ ಕೆಲಸವನ್ನು ನಿರ್ವಹಿಸಿದ್ದಾರೆಂದು ಕಂಡು ಬಂದರೆ ಮತ್ತು ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ 2 ವರ್ಷಗಳ ಒಳಗಾಗಿ ಉತ್ತೀರ್ಣರಾದರೆ, ಅರ್ಹತಾ ಪರೀಕ್ಷಾವಧಿಯು ಮುಕ್ತಾಯದ ನಂತರ ಹಂಗಾಮಿಯ ನೇಮಕಾತಿಯನ್ನು ಖಾಯಂ ಮಾಡುವ ಬಗ್ಗೆ (ಅರ್ಹತಾ ಪರೀಕ್ಷಾವಧಿಯನ್ನು ತೃಪ್ತಿಕರವಾಗಿ ಪೂರೈಸಿರುವ ಬಗ್ಗೆ) ಪರಿಶೀಲಿಸಲಾಗುವುದು. ಅರ್ಹತಾ ಪರೀಕ್ಷಾವಧಿಯಲ್ಲಿ ಸೇವೆಯು ತೃಪ್ತಿಕರವಾಗಿಲ್ಲದಿದ್ದಲ್ಲಿ ಅರ್ಹತಾ ಪರೀಕ್ಷಾವಧಿಯು ಮುಗಿದ ನಂತರವೇ ಆಗಲೀ ಅದಕ್ಕೂ ಮೊದಲೇ ಆಗಲೀ ನೇಮಕಾತಿಯನ್ನು ಕೊನೆಗೊಳಿಸಲಾಗುವುದು.

8. ಅಭ್ಯರ್ಥಿಯು ತನ್ನ ಆರೋಗ್ಯದ ಬಗ್ಗೆ ವೈದ್ಯಕೀಯ ಪ್ರಮಾಣ ಪತ್ರವನ್ನು ಅಸಿಸ್ಟೆಂಟ್ ಸರ್ಜನ್ ಗ್ರೇಡ್–II ಅಥವಾ ಅದಕ್ಕೂ ಮೇಲ್ದರ್ಜೆಯ ವೈದ್ಯಾಧಿಕಾರಿಯಿಂದ ಪಡೆದು ಕರ್ತವ್ಯಕ್ಕೆ ಹಾಜರಾಗುವ ಮೊದಲು ವರದಿ ಮಾಡಿಕೊಳ್ಳುವ ಪ್ರಾಧಿಕಾರಕ್ಕೆ ಸಲ್ಲಿಸತಕ್ಕದ್ದು.

9. ಅಭ್ಯರ್ಥಿಯು ನೇಮಕಾತಿ ಕೋರಿ ಸಲ್ಲಿಸಿರುವ/ಸಲ್ಲಿಸುವ ದಾಖಲೆಗಳಲ್ಲಿ ಯಾವುದುದಾದರೂ ಕೃತ್ರಿಮವೆಂದೂ, ಅಸತ್ಯವೆಂದೂ ಕಂಡುಬಂದಲ್ಲಿ ಮತ್ತು ಅಭ್ಯರ್ಥಿಯು ತಪ್ಪು ಮಾಹಿತಿಯನ್ನು ನೀಡಿದ್ದಾನೆಂದು, ನೇಮಕಾತಿಯ ನಂತರ ಯಾವುದೇ ಸಮಯದಲ್ಲಿ ಕಂಡು ಬಂದಲ್ಲಿ ಯಾವುದೇ ಮುನ್ಸೂಚನೆ ನೀಡದೇ ಅಭ್ಯರ್ಥಿಯನ್ನು ಸೇವೆಯಿಂದ ತೆಗೆದುಹಾಕಲಾಗುವುದು ಜೊತೆಗೆ ದಂಡನೆಯ ಬಗ್ಗೆ ಕೂಡ ಕ್ರಮ ಕೈಗೊಳ್ಳಲಾಗುವುದು.

10. ಉದ್ಯೋಗ ಮತ್ತು ತರಬೇತಿ ಇಲಾಖೆಯಿಂದ (ಉದ್ಯೋಗ ವಿನಿಮಯ ಕೇಂದ್ರ), ಅಭ್ಯರ್ಥಿಗಳಿಗೆ ನೀಡಲಾಗಿರುವ ಗುರುತಿನ ಚೀಟಿಗಳನ್ನು ಕೆಲಸಕ್ಕೆ ಹಾಜರಾದಾಗ ಕಛೇರಿ ಮುಖ್ಯಸ್ಥರಿಗೆ ಹಿಂದಿರುಗಿಸತಕ್ಕದ್ದು ಹಾಗೂ ಉದ್ಯೋಗ ವಿನಿಯಮ ಕೇಂದ್ರದಿಂದ ಗುರುತಿನ ಚೀಟಿ ಪಡೆದಿಲ್ಲವಾದಲ್ಲಿ ಅಭ್ಯರ್ಥಿಯು ಈ ಬಗ್ಗೆ ಪ್ರಮಾಣ ಪತ್ರ ಸಲ್ಲಿಸತಕ್ಕದ್ದು.

11. ಈ ಅಭ್ಯರ್ಥಿಯ ಜ್ಯೇಷ್ಠತೆಯು, ಕರ್ನಾಟಕ ಸರ್ಕಾರಿ ನೌಕರರ ಜ್ಯೇಷ್ಠತಾ ನಿಯಮ 1957ರ ನಿಯಮ 5(ಎ) ಮತ್ತು (ಬಿ) ರೀತ್ಯಾ ನಿರ್ಧಾರವಾಗುತ್ತದೆ.

12. ಅಭ್ಯರ್ಥಿಗಳಿಗೆ ಸಂಬಂಧಿಸದೇ ಇರುವ ಸ್ಥಳೀಯ ಇಬ್ಬರು ಗೌರವಾನ್ವಿತ ವ್ಯಕ್ತಿಗಳಿಂದ ಗುಣ ನಡತೆ ಪ್ರಮಾಣ ಪತ್ರಗಳನ್ನು ಹಾಗೂ ಇತ್ತೀಚೆಗಿನ ಭಾವಚಿತ್ರಗಳನ್ನು ಕರ್ತವ್ಯಕ್ಕೆ ಹಾಜರಾಗುವಾಗ ಸಲ್ಲಿಸತಕ್ಕದ್ದು.

**ಎಸ್.ಜಿ. ಹೆಗಡೆ,**
ಸಹಕಾರ ಸಂಘಗಳ ನಿಬಂಧಕರು,
ಕರ್ನಾಟಕ ರಾಜ್ಯ ಬೆಂಗಳೂರು.

**ಪಿ.ಆರ್. 1089**

## ಸಹಕಾರ ಸಂಘಗಳ ಉಪ ನಿಬಂಧಕರ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

**ವಿಷಯ:** ಸಮಾಪನೆಗೊಂಡಿರುವ ಹೊಸಕೋಟೆ ತಾಲ್ಲೂಕಿನ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘಗಳ ನೋಂದಣಿ ಸಂಖ್ಯೆಯನ್ನು ರದ್ದುಪಡಿಸುವ ಬಗ್ಗೆ.

**ಉಲ್ಲೇಖ:** 1) ಕಛೇರಿ ಆದೇಶ ಸಂಖ್ಯೆ ಡಿಆರ್‌ಬಿ (ಆರ್) ಸಮಾಪನೆ/47/2010–11, ದಿನಾಂಕ 29–3–2011.
2) ಸಹಕಾರ ಸಂಘಗಳ ಸಹಾಯಕ ನಿಬಂಧಕರು ದೊಡ್ಡಬಳ್ಳಾಪುರ ರವರ ಪತ್ರ ಸಂಖ್ಯೆ ಸನಿ 47/ಸಮಾಪನೆ/13/2012–13, ದಿನಾಂಕ 27–6–2012.

**ಪ್ರಸ್ತಾವನೆ:**

ಹೊಸಕೋಟೆ ತಾಲ್ಲೂಕಿನ 8 ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘಗಳು ಅವುಗಳ ಬೈಲಾ ಉದ್ದೇಶದ ರೀತ್ಯ ಕಾರ್ಯ ಚಟುವಟಿಕೆ ನಡೆಸದೆ ಸ್ಥಗಿತಗೊಂಡಿದ್ದರಿಂದ ಸಂಘದ ಕಾರ್ಯಕಾರಿ ಸಮಿತಿಯವರು ಈ ಸಹಕಾರ ಸಂಘವನ್ನು ಪುನಃಚ್ಛೇತನಗೊಳಿಸಲು ಆಸಕ್ತಿ ಇಲ್ಲದೇ ಇರುವುದರಿಂದ ಹಾಗೂ ಈ ಸಂಘದ ಸದಸ್ಯರಿಗಾಗಲಿ ಸಾರ್ವಜನಿಕರಿಗಾಗಲಿ ಯಾವುದೇ ಪ್ರಯೋಜನವಿಲ್ಲವೆಂದು ವರದಿಯಾಗಿದ್ದರಿಂದ ಉಲ್ಲೇಖ (1) ರಲ್ಲಿ ಸೂಚಿಸಿರುವ ದಿನಾಂಕ 29–1–2011ರ ಆದೇಶದನ್ವಯ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಕಲಂ 72 ರನುಸಾರ ಅವುಗಳನ್ನು ಸಮಾಪನೆಗೊಳಿಸಿ ಸಮಾಪನಾಧಿಕಾರಿಯನ್ನಾಗಿ ಸಹಕಾರ ಅಭಿವೃದ್ಧಿ ಅಧಿಕಾರಿ ಹೊಸಕೋಟೆ ಇವರನ್ನು ನೇಮಕ ಮಾಡಲಾಗಿತ್ತು. ಸದರಿ ಸಮಾಪನಾಧಿಕಾರಿಗಳು ಈ ಸಂಘದ ಪ್ರಭಾರ ವಹಿಸಿಕೊಂಡು ಕಾಯ್ದೆ ಕಾನೂನು ಪ್ರಕಾರ ಆಸ್ತಿ ಜವಾಬ್ದಾರಿ ವಿಲೇವಾರಿ ಮಾಡಿ ಅವುಗಳ ನೋಂದಣಿ ರದ್ದತಿಗೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ. ಈ ಸಂಘಗಳು ಸಮಾಪನಾ ಕಾರ್ಯವನ್ನು ಮುಕ್ತಾಯಗೊಳಿಸಿದ್ದರಿಂದ ಇವುಗಳ ನೋಂದಣಿ ರದ್ದು ಮಾಡುವಂತೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದೊಡ್ಡಬಳ್ಳಾಪುರ. ಇವರು ಉಲ್ಲೇಖ (2)ರ ಪತ್ರದನ್ವಯ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಅವುಗಳ ನೋಂದಣಿ ರದ್ದು ಮಾಡುವುದು ಸೂಕ್ತವೆಂದು ಅಭಿಪ್ರಾಯ ಪಟ್ಟು ಈ ಕೆಳಗಿನ ಆದೇಶ ಹೊರಡಿಸಿದೆ.

### ಆದೇಶ

### ಕ್ರಮ ಸಂಖ್ಯೆ: ಡಿಆರ್‌ಬಿ (ಆರ್) / ಸಮಾಪನೆ/47/2010–11, ದಿನಾಂಕ 27–07–2012

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959 ಕಲಂ 75 ರನುಸಾರ ಹಾಗೂ ಸರ್ಕಾರದ ಅಧಿಸೂಚನೆ ಕ್ರಮಾಂಕ ಸಿಓ 139 ಸಿಎಲ್‌ಎಂ 2010 ದಿನಾಂಕ : 17–2–2011 ರನ್ವಯ ದತ್ತವಾಗಿರುವ ಅಧಿಕಾರದಂತೆ ಆರ್. ಲೋಕೇಶ್ ಸಹಕಾರ ಸಂಘಗಳ ಉಪನಿಬಂಧಕರು, ಬೆಂಗಳೂರು ಗ್ರಾಮಾಂತರ

ಜಿಲ್ಲೆ, ಬೆಂಗಳೂರು ಆದ ನಾನು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುವ ಈ ಕೆಳಗೆ ಸೂಚಿಸಿರುವ ಸಹಕಾರ ಸಂಘಗಳ ನೋಂದಣಿ ರದ್ದುಗೊಳಿಸಿ ಆದೇಶಿಸಿರುತ್ತೇನೆ.

| ಕ್ರ. ಸಂ. | ನೋಂದಣಿ ರದ್ದುಪಡಿಸಿರುವ ಸಹಕಾರ ಸಂಘಗಳ ಹೆಸರು | ರದ್ದುಪಡಿಸಿದ ನೋಂದಣಿ ಸಂಖ್ಯೆ |
|---|---|---|
| 1 | ಆಲಪ್ಪನಹಳ್ಳಿ, ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ, ಆಲಪ್ಪನಹಳ್ಳಿ, ಹೊಸಕೋಟೆ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ | ಸಂಖ್ಯೆ : ಎಆರ್‌ಡಿ 47/ನೋಂದಣಿ/ 30108/2000–01 |
| 2 | ಕಂಬಳಿಪುರ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ, ಕಂಬಳಿಪುರ, ಹೊಸಕೋಟೆ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ | ಸಂಖ್ಯೆ : ಎಆರ್‌ಡಿ 47/ನೋಂದಣಿ/ 30106/2000–01 |
| 3 | ಅನುಗೊಂಡನಹಳ್ಳಿ ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ, ಅನುಗೊಂಡನಹಳ್ಳಿ, ಹೊಸಕೋಟೆ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ | ಸಂಖ್ಯೆ : ಎಆರ್‌ಡಿ 47/ನೋಂದಣಿ/ 30114/2000–01 |
| 4 | ಸೂಲಿಬೆಲೆ, ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ, ಸೂಲಿಬೆಲೆ, ಹೊಸಕೋಟೆ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ | ಸಂಖ್ಯೆ : ಎಆರ್‌ಡಿ 47/ನೋಂದಣಿ/ 30115/2000–01 |
| 5 | ವಾಗಟ, ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ, ವಾಗಟ, ಹೊಸಕೋಟೆ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ | ಸಂಖ್ಯೆ : ಎಆರ್‌ಡಿ 47/ನೋಂದಣಿ/ 30709/2000–01 |
| 6 | ಮುಗಬಾಳ, ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ, ಮುಗಬಾಳ, ಹೊಸಕೋಟೆ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ | ಸಂಖ್ಯೆ : ಎಆರ್‌ಡಿ 47/ನೋಂದಣಿ/ 30116/2000–01 |
| 7 | ಸಮೇತನಹಳ್ಳಿ, ಸಣ್ಣ ನೀರಾವರಿ ನೀರು ಬಳಕೆದಾರರ ಸಹಕಾರ ಸಂಘ, ಸಮೇತನಹಳ್ಳಿ, ಹೊಸಕೋಟೆ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ | ಸಂಖ್ಯೆ : ಎಆರ್‌ಡಿ 47/ನೋಂದಣಿ/ 30118/2000–01 |

ಈ ಆದೇಶವನ್ನು ನನ್ನ ಸ್ವ ಸಹಿ ಹಾಗೂ ಕಛೇರಿಯ ಮುದ್ರೆಯೊಂದಿಗೆ ದಿನಾಂಕ 27–7–2012 ರಂದು ಹೊರಡಿಸಿರುತ್ತೇನೆ.

ಸಹಕಾರ ಸಂಘಗಳ ಉಪ ನಿಬಂಧಕರು,
ಬೆಂಗಳೂರು ಗ್ರಾಮಾಂತರ ಜಿಲ್ಲೆ.

**ಪಿ.ಆರ್. 1090**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯದಲ್ಲಿ, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ

### ಪ್ರಕಟಣೆ

**ಸಂಖ್ಯೆ : ಕಾಅಚಿ : ಡಬ್ಲ್ಯೂಸಿಎ : ಎಫ್‌ಸಿ–04/2012**

**ಅರ್ಜಿದಾರರು :**

1. ಶ್ರೀಮತಿ ಸರಸ್ವತಿ ಕೋಂ ಲೇಟ್ ಕೆ.ಎಂ. ನಾಗರಾಜ್
2. ಕು: ಕೆ.ಎನ್. ರಾಣಿ, ಬಿನ್ ಲೇಟ್ ಕೆ.ಎಂ. ನಾಗರಾಜ್
3. ಕು: ಕೆ.ಎನ್. ವಾಣಿ, ಬಿನ್ ಲೇಟ್ ಕೆ.ಎಂ. ನಾಗರಾಜ್
4. ಶ್ರೀ ಕೆ. ಮುನಿಸ್ವಾಮಿ ಬಿನ್ ಲೇಟ್ ಚಿಕ್ಕಗಂಗಪ್ಪ
5. ಶ್ರೀಮತಿ ನಾಗಮ್ಮ ಕೋಂ ಕೆ. ಮುನಿಸ್ವಾಮಿ

ಕಂಚಿನಾಯಕನ ಹಳ್ಳಿ, ಮುಂಗಾನಹಳ್ಳಿ ಹೋಬಳಿ
ಚಿಂತಾಮಣಿ ತಾಲ್ಲೂಕು, ಚಿಕ್ಕಬಳ್ಳಾಪುರ ಜಿಲ್ಲೆ.

**ವಿರುದ್ಧ**

**ಪ್ರತಿವಾದಿಗಳು :**

ವಿಭಾಗೀಯ ನಿಯಂತ್ರಣಾಧಿಕಾರಿ,
ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮ,
ವಿಭಾಗೀಯ ನಿಯಂತ್ರಣಾಧಿಕಾರಿ ಕಛೇರಿ,
ಚಿಕ್ಕಬಳ್ಳಾಪುರ ವಿಭಾಗ, ಚಿಕ್ಕಬಳ್ಳಾಪುರ ಜಿಲ್ಲೆ

ಸಾರ್ವಜನಿಕರಿಗೆ ಹಾಗೂ ಸಂಬಂಧಪಟ್ಟವರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ, ಈ ಪ್ರಕರಣದಲ್ಲಿನ ಮೃತ ಕೆ.ಎಂ. ನಾಗರಾಜ ಪ್ರತಿವಾದಿಯ ಅಧೀನದಲ್ಲಿ ಚಾಲಕನಾಗಿ ಕೆಲಸ ನಿರ್ವಹಿಸುತ್ತಿದ್ದಾಗ ದಿನಾಂಕ 05–03–2009 ರಂದು ಉದ್ಯೋಗದಿಂದ ಮತ್ತು ಉದ್ಯೋಗದ ಸಮಯದಲ್ಲಿ ಮರಣ ಹೊಂದಿದ್ದು ಆ ಪ್ರಯುಕ್ತ ಪ್ರತಿವಾದಿಯವರು ದಿನಾಂಕ 25–06–2011 ರಂದು ಮೃತನ ವಾರಸುದಾರರಿಗೆ

ಪಾವತಿಸಲು ಅನುಕೂಲವಾಗುವಂತೆ ರೂ. 2,69,098/– ಗಳ ಪರಿಹಾರವನ್ನು ಈ ನ್ಯಾಯಾಲಯದಲ್ಲಿ ಠೇವಣಿ ಇರಿಸಿದ್ದಾರೆ ಹಾಗೂ ಈ ಪರಿಹಾರವನ್ನು ಪಾವತಿಸಬೇಕೆಂದು ಕೋರಿ ಮೃತರ ವಾರಸುದಾರರಾದ 1 ರಿಂದ 5 ರ ವರೆಗಿನ ಅರ್ಜಿದಾರರು ಈ ನ್ಯಾಯಾಲಯದಲ್ಲಿ ಕ್ಲೇಂ ಅರ್ಜಿಯನ್ನು ಸಲ್ಲಿಸಿದ್ದಾರೆ.

ಆದ್ದರಿಂದ ಮೇಲ್ಕಂಡ 1 ರಿಂದ 5 ರ ವರೆಗಿನ ಅರ್ಜಿದಾರರುಗಳನ್ನು ಹೊರತುಪಡಿಸಿ (ಜೀವಂತ ಸದಸ್ಯರು) ಬೇರೆ ಯಾರಾದರೂ ಸದರಿ ಕಾರ್ಮಿಕರಿಗೆ ಸಂಬಂಧಿಸಿದ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಲು ಪ್ರಾರ್ಥಿಸುವುದಾದಲ್ಲಿ ಅಂತಹವರು ಈ ಪ್ರಕಟಣೆಯನ್ನು ರಾಜ್ಯ ಪತ್ರದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳನ್ನಾಗಲೀ ಈ ನ್ಯಾಯಾಲಯಕ್ಕೆ ಸಲ್ಲಿಸತಕ್ಕದ್ದೆಂದು ಈ ಮೂಲಕ ಸೂಚಿಸಲಾಗಿದೆ.

ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಕಾರ್ಮಿಕ ಅಧಿಕಾರಿ ಮತ್ತು**
**ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,**
**ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ**

**ಪಿ.ಆರ್. 1088**

## ಜೆ.ಎಂ.ಎಫ್.ಸಿ. ನ್ಯಾಯಾಲಯ–2, ದಾವಣಗೆರೆ

**ಅಧಿಸೂಚನೆ ಸಂಖ್ಯೆ : 01/2012, ದಿನಾಂಕ 01–08–2012**

ಸಾರ್ವಜನಿಕರಿಗೆ ಈ ಮೂಲಕ ಪ್ರಚುರಪಡಿಸುವುದನೆಂದರೆ, ಜೆಎಂಎಫ್‌ಸಿ–2ನೇ ನ್ಯಾಯಾಲಯ, ದಾವಣಗೆರೆ ಇಲ್ಲಿ ವಿಲೇವಾರಿಯಾದ ಪ್ರಕರಣಗಳಲ್ಲಿ ಜಪ್ತಿ ಮಾಡಿಕೊಂಡ ಈ ಕೆಳಕಾಣಿಸಿದ ವಾಹನಗಳು ವಾರಸುದಾರರ ಇಲ್ಲದೇ ಹಾಗೇ ಇದ್ದು ಸದರಿಯವುಗಳ ವಾರಸುದಾರರು ಯಾರಾದರೂ ಇದ್ದಲ್ಲಿ ಈ ಪ್ರಕಟಣೆ ಹೊರಡಿಸಿದ ಒಂದು ತಿಂಗಳ ಒಳಗಾಗಿ ಸೂಕ್ತ ದಾಖಲಾತಿಗಳನ್ನು ಹಾಜರುಪಡಿಸಿ ವಶಕ್ಕೆ ತೆಗೆದುಕೊಳ್ಳಬಹುದಾಗಿರುತ್ತದೆ. ಒಂದು ವೇಳೆ ಯಾರು ವಾರಸುದಾರರು ಬಾರದೇ ಹೋದಲ್ಲಿ ಸದರಿ ವಾಹನಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

| ಕ್ರ. ಸಂ. | ಮೊಕದ್ದಮೆ ಸಂಖ್ಯೆ ಕಲಂ | ಪಿಆರ್ ನಂಬರು ಮತ್ತು ಪಿಎಫ್ ನಂ. ದಿನಾಂಕ | ನೋಂದಣಿ ಸಂಖ್ಯೆ | ಇಂಜಿನ್ ಮತ್ತು ಚಾಸಿಸ್ ನಂಬರು |
|---|---|---|---|---|
| 1 | ಸಿಸಿ 821/05<br>ಸಿಆರ್ 113/04<br>ಅಜಾದನಗರ ಪೋಲಿಸ್ ಠಾಣೆ<br>ಕಲಂ 98 ಕೆಪಿ ಆಕ್ಟ್ | ಪಿಆರ್ 87/2005<br>ಪಿಎಫ್ ನಂ. 84/04<br>ದಿನಾಂಕ 11–10–2004 | ಲೂನಾ<br>ಸಿಎನ್‌ಯು 5881 | ಇಂಜಿನ್ ನಂ. ಕೆಎ415744 ಚಾಸಿಸ್ ನಂ. ಎಲ್‌ಎಲ್ 426109 |
| 2 | ಸಿಸಿ 1704/06<br>ಸಿಆರ್ 18/06<br>ಮಾಯಕೊಂಡ ಪೋಲಿಸ್ ಠಾಣೆ<br>ಕಲಂ 79, 80 ಕೆಪಿ ಆಕ್ಟ್ | ಪಿಆರ್ 63/2007<br>ಪಿಎಫ್ ನಂ. 08/06 | ಟಿವಿಎಸ್ ಸುಜುಕಿ ಎಎಕ್ಸ್ 100 | ಚಾಸಿಸ್ ನಂ. 6237 |
| 3 | ಸಿಸಿ 3166/06 ಸಿಆರ್ ಕಲಂ 379 ಐಪಿಸಿ | ಪಿಆರ್ 195/07<br>ಪಿಎಫ್ ನಂ. 51/06<br>ದಿನಾಂಕ 10–06–2006 | ಹಿರೋ ಹೋಂಡ ಸ್ಪೆಂಡರ್ | ಚಾಸಿಸ್ ನಂ. 00ಎ 19 ಎಫ್ 0026. ಇಂಜಿನ್ ನಂ. 00ಎ17ಇ01087 |
| 4 | ಸಿಸಿ 51/08<br>ಸಿಆರ್ 107/07<br>ಮಾಯಕೊಂಡ ಪೊಲೀಸ್ ಠಾಣೆ ಕಲಂ 279, 337 ಐಪಿಸಿ | ಪಿಆರ್ 114/08<br>ಪಿಎಫ್ ನಂ. 53/07<br>ದಿನಾಂಕ 22–11–07 | ಹಿರೋ ಹೋಂಡ ಸಿಡಿ 100 ಕೆಎ–16–ಇ–1270 | |

| ಕ್ರ. ಸಂ. | ಮೊಕದ್ದಮೆ ಸಂಖ್ಯೆ ಕಲಂ | ಪಿಆರ್ ನಂಬರು ಮತ್ತು ಪಿಎಫ್ ನಂ. ದಿನಾಂಕ | ನೋಂದಣಿ ಸಂಖ್ಯೆ | ಇಂಜಿನ್ ಮತ್ತು ಚಾಸಿಸ್ ನಂಬರು |
|---|---|---|---|---|
| 5 | ಸಿಸಿ 1397/08<br>ಸಿಆರ್ 11/07<br>ಬಸವನಗರ ಪೋಲಿಸ್ ಠಾಣೆ<br>ಕಲಂ 379, ಐಪಿಸಿ | ಪಿಆರ್ 17/09<br>ಪಿಎಫ್ ನಂ. 59/07 | ಹಿರೋ ಹೋಂಡ ಸ್ಪೆಂಡರ್<br>ಕೆಎ–17–ಎಲ್ 5115 | ಚಾಸಿಸ್ ನಂ. 99319<br>ಎಫ್ 00413 |
| 6 | ಸಿಸಿ 1748/09<br>ಸಿಆರ್ 85/09<br>ಮಾಯಕೊಂಡ ಪೋಲಿಸ್ ಠಾಣೆ<br>ಕಲಂ 279, 337 ಐಪಿಸಿ | ಪಿಆರ್ 165/10<br>ಪಿಎಫ್ ನಂ. 47/09<br>ದಿನಾಂಕ 13–06–2009 | ಬಜಾಜ್ ಎಂ 80<br>ಮೋಟಾರ್ ಬೈಕ್<br>ಕೆಎ–17–ಹೆಚ್ 3398 | ಚಾಸಿಸ್ ನಂ. 60945,<br>5549 |

**ಜೆ.ಎಂ.ಎಫ್.ಸಿ. ನ್ಯಾಯಾಲಯ–2,**
ದಾವಣಗೆರೆ.

**ಪಿ.ಆರ್. 1068**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು ನ್ಯಾಯಾಲಯದಲ್ಲಿ, ಕೋಲಾರ

### ಅಧಿಸೂಚನೆ

### ಪ್ರಕರಣ ಸಂಖ್ಯೆ : ಡಬ್ಲ್ಯೂ/ಸಿಎ/ಎಫ್‌ಸಿ: 10/2011

**ಅರ್ಜಿದಾರರು :**

1. ಶ್ರೀಮತಿ ರತ್ನಬಾಯಿ ಕೋಂ ಲೇಟ್ ನಾರಾಯಣರಾವ್
2. ಮಂಜುಳಬಾಯಿ ಬಿನ್ ಲೇಟ್ ನಾರಾಯಣರಾವ್
3. ಕುಪೇಂದ್ರರಾವ್ ಬಿನ್ ಲೇಟ್ ನಾರಾಯಣರಾವ್
4. ಶಿವಾಜಿರಾವ್ ಬಿನ್ ಲೇಟ್ ನಾರಾಯಣರಾವ್

ವಾಸ:– ಪಲಮಡುಗು, ಹಾಮಲೇಟ್ ದಿನ್ನುರು (ವಿ), ಬೂದಿಕೋಟೆ (ಹೋ), ಬಲಮಂದೆ (ಪೋ), ಬಂಗಾರಪೇಟೆ (ತಾ), ಕೋಲಾರ (ಜಿ).

**ವಿರುದ್ಧ**

**ಪ್ರತಿವಾದಿಗಳು :**

1. ಶ್ರೀ ಕೆ. ಮುನಿಯಪ್ಪ ಬಿನ್ ಕೃಷ್ಣಪ್ಪ
   ವಾಸ:– ಪಲಮಡುಗು, ಹಾಮಲೇಟ್ ದಿನ್ನುರು (ವಿ), ಬೂದಿಕೋಟೆ (ಹೋ), ಬಲಮಂದೆ (ಪೋ), ಬಂಗಾರಪೇಟೆ (ತಾ), ಕೋಲಾರ (ಜಿ).
2. ಶ್ರೀನಾಥ್ ಬಿನ್ ತಿಮ್ಮರಾಯಪ್ಪ
   ವಾಸ:– ಎಮ್. ಹೊಸಹಳ್ಳಿ (ವಿ), ಗೊಲ್ಲಹಳ್ಳಿ (ಪೋ), ಕಾಮಸಮುದ್ರ, ಬೂದಿಕೋಟೆ (ಹೋ), ಬಂಗಾರಪೇಟೆ (ತಾ).

ಅರ್ಜಿದಾರರಾದ ಶ್ರೀಮತಿ ರತ್ನಬಾಯಿ ಅವರು ತಮ್ಮ ಗಂಡ ಲೇಟ್ ನಾರಾಯಣರಾವ್, ಅವರು ಶ್ರೀ ಕೆ. ಮುನಿಯಪ್ಪ ಮತ್ತು ಶ್ರೀನಾಥ್ ಬಳಿ ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ 13–08–2009 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ, ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೆ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ/ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸಲಾಗುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಹಾಗೂ ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ 29–09–2011 ರಂದು ನೀಡಲಾಗಿದೆ.

**ಎಸ್. ರೇವಣ್ಣ,**
ಕಾರ್ಮಿಕ ಅಧಿಕಾರಿ ಮತ್ತು ನಷ್ಟ ಪರಿಹಾರ ಆಯುಕ್ತರು,
ಕೋಲಾರ ಉಪ ವಿಭಾಗ, ಕೋಲಾರ

**ಪಿ.ಆರ್. 1077**

## ಜಲಸಂಪನ್ಮೂಲ ಇಲಾಖೆ

## ಮುಖ್ಯ ಇಂಜಿನೀಯರ್‌ರವರ ಕಛೇರಿ, ಸಣ್ಣ ನೀರಾವರಿ (ಉತ್ತರ) ವಲಯ, ವಿಜಾಪೂರ

### ಕಚೇರಿ ಆದೇಶ

**ಕ್ರ.ಸಂ. ಮುಇಂ/ಸನೀ(ಉ)ವ/ಬಿಜೆಪಿ/ಸಿ–2/2012–13, ದಿನಾಂಕ 08ನೇ ಆಗಸ್ಟ್ 2012**

**ವಿಷಯ:** ಮುಖ್ಯ ಇಂಜಿನೀಯರ್, ಸಣ್ಣ ನೀರಾವರಿ (ಉ) ವಲಯ, ವಿಜಾಪೂರ.
ಕಚೇರಿಯಲ್ಲಿ ಮಾಹಿತಿ ಹಕ್ಕು ಅಧಿನಿಯಮ 2005 ರಡಿಯಲ್ಲಿ ಸಾರ್ವಜನಿಕ ಮಾಹಿತಿ ಅಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಉಲ್ಲೇಖ:** 1) ಈ ಕಚೇರಿಯ ಅಧಿಸೂಚನೆ ಪತ್ರ ಸಂಖ್ಯೆ : ಮುಇಂ/ಸನೀಇ/ಬಿಜೆಪಿ/ಸಿ–2/2009–10/1551, ದಿನಾಂಕ : 11–11–2011.
2) ಸರ್ಕಾರದ ಆದೇಶ ಸಂಖ್ಯೆ : 60/ಸೇಇಸು/ದಿನಾಂಕ 13–06–2012.
3) ಈ ಕಚೇರಿಯ ವರ್ಗಾವಣೆಯ ಪ್ರಮಾಣ ಪತ್ರ ದಿನಾಂಕ 22–06–2012.

ಸಾರ್ವಜನಿಕ ಮಾಹಿತಿ ಹಕ್ಕು ಅಧಿನಿಯಮ 2005 ರಡಿಯಲ್ಲಿ ಸೆಕ್ಷನ್–5(1) ರಡಿಯಲ್ಲಿ ಈ ಕಚೇರಿಯಲ್ಲಿ ಶ್ರೀ ಜಗನ್ನಾಥ ಹಲಿಂಗೆ, ಅಧೀಕ್ಷಕ ಇಂಜಿನೀಯರರು ಇವರನ್ನು ಉಲ್ಲೇಖ–(1) ರಡಿಯಲ್ಲಿ ಸಾರ್ವಜನಿಕ ಮಾಹಿತಿ ಅಧಿಕಾರಿಗಳೆಂದು ನೇಮಿಸಲಾಗಿತ್ತು. ಸದರಿ ಅಧಿಕಾರಿಗಳು ಸರ್ಕಾರದ ಅಧಿಸೂಚನೆ ಸಂ : ಸನೀಇ/152/ಸೇಎಸು/2012, ದಿನಾಂಕ 25–05–2012 ರನ್ವಯ ವರ್ಗಾವಣೆಯಾಗಿದ್ದು, ಅವರ ಸ್ಥಾನದಲ್ಲಿ ಶ್ರೀ ಹೆಚ್. ಸುರೇಶ, ಅಧೀಕ್ಷಕ ಇಂಜಿನೀಯರರನ್ನು ನಿಯುಕ್ತಿಗೊಳಿಸಲಾಗಿದೆ. ಸದರಿ ಅಧಿಕಾರಿಗಳು ಈ ಕಚೇರಿಯಲ್ಲಿ ಅಧೀಕ್ಷಕ ಇಂಜಿನೀಯರ್ ಹುದ್ದೆಯ ಪ್ರಭಾರವನ್ನು ದಿನಾಂಕ : 22–06–2012 ರಂದು ವಹಿಸಿಕೊಂಡ ಪ್ರಯುಕ್ತ ಶ್ರೀ ಹೆಚ್. ಸುರೇಶ, ಅಧೀಕ್ಷಕ ಇಂಜಿನೀಯರರನ್ನು ಈ ಕಚೇರಿಯ ಸಾರ್ವಜನಿಕ ಮಾಹಿತಿ ಅಧಿಕಾರಿಗಳನ್ನಾಗಿ ನೇಮಿಸಿ, ಸಾರ್ವಜನಿಕ ಮಾಹಿತಿ ಹಕ್ಕು ಕಾಯ್ದೆ–2005ರ ಸೆಕ್ಷನ್–5(1) ರನ್ವಯ ಈ ಕೆಳಗಿನಂತೆ ಅಧಿಸೂಚನೆಯನ್ನು ಹೊರಡಿಸಲಾಗಿದೆ.

| ಕ್ರ. ಸಂ. | ಕಚೇರಿಯ ಹೆಸರು | ಸಾರ್ವಜನಿಕ ಮಾಹಿತಿ ಅಧಿಕಾರಿ ಸೆಕ್ಷನ್–5(1) | ಷರಾ |
|---|---|---|---|
| 1 | ಮುಖ್ಯ ಇಂಜಿನೀಯರರವರ ಕಚೇರಿ,<br>ಸಣ್ಣ ನೀರಾವರಿ (ಉ) ವಲಯ, ವಿಜಾಪೂರ. | ಶ್ರೀ ಹೆಚ್. ಸುರೇಶ, ಅಧೀಕ್ಷಕ ಇಂಜಿನೀಯರರು,<br>ಮುಖ್ಯ ಇಂಜಿನೀಯರರವರ ಕಚೇರಿ,<br>ಸಣ್ಣ ನೀರಾವರಿ (ಉ) ವಲಯ, ವಿಜಾಪೂರ. | |

**ಎಸ್.ಬಿ. ಸಿದ್ದಗಂಗಪ್ಪ,**
ಮುಖ್ಯ ಇಂಜಿನೀಯರ್,
ಸಣ್ಣ ನೀರಾವರಿ (ಉತ್ತರ) ವಲಯ, ವಿಜಾಪೂರ.

**ಪಿ.ಆರ್. 1199**

## ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆಯಡಿ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ

### ಪ್ರಕಟಣೆ

**ಸಂಖ್ಯೆ : ಕಾಅಗ : ಕಾನಪ : ಎಫ್–38/2012, ದಿನಾಂಕ 08ನೇ ಆಗಸ್ಟ್ 2012**

**ಅರ್ಜಿದಾರರು :–**

1. ನಸೀಮಾ w/o ಇರ್ಸಾದ್ ಅಹ್ಮದ್ ಶಿರಹಟ್ಟಿ
2. ನುರ್ಶಾದ್ ತಂದೆ : ಇರ್ಸಾದ್ ಅಹ್ಮದ್ ಶಿರಹಟ್ಟಿ
3. ಅಜಾಮ್ ತಂದೆ : ಇರ್ಸಾದ್ ಅಹ್ಮದ್ ಶಿರಹಟ್ಟಿ
4. ಉಜಾಮ್ ತಂದೆ : ಇರ್ಸಾದ್ ಅಹ್ಮದ್ ಶಿರಹಟ್ಟಿ
5. ಮಸಾಬಿ ಕೋಂ : ಅಬ್ದುಲ್‌ಗನಿ ಇಮಾಮಸಾಬ ಶಿರಹಟ್ಟಿ
6. ಅಬ್ದುಲ್‌ಗನಿ ಇಮಾಮ ಸಾಬ ಶಿರಹಟ್ಟಿ

ಇವರೆಲ್ಲರ ವಿಳಾಸ : ಅಶೋಕನಗರ, ಕುರಹಟ್ಟಿಪೇಟೆ, ಬೆಟಗೇರಿ.

**ವಿರುದ್ಧ**

**ಪ್ರತಿವಾದಿಗಳು :–**

1. ಶ್ರೀ ಮೋಹನ ಹೂವಪ್ಪ ಗಜಕೋಶ,
ಸಾ॥ ಕಕ್ಕಯ್ಯ ಬಳಗ, ಪಿ ಅಂಡ್ ಟಿ ಕ್ವಾರ್ಟರ್ಸ್ ಎದುರಿಗೆ, ರಾಜೀವ ಗಾಂಧಿ ನಗರ, ಗದಗ.
2. ಬ್ರ್ಯಾಂಚ್ ಮ್ಯಾನೇಜರ್,
ದಿ ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ.
ಎನ್.ಐ.ಎ. ಗದಗ ಬ್ರ್ಯಾಂಚ್, ಪಿ.ಬಿ. ರೋಡ್, ಗದಗ.

ಅರ್ಜಿದಾರರಾದ (1) ಶ್ರೀಮತಿ ನಸೀಮಾ (2) ನುರ್ಶಾದ್ (3) ಅಜಾಮ್ (4) ಉಜಾಮ್ (5) ಮಸಾಬಿ (6) ಅಬ್ದುಲ್‌ಗನಿ ಇಮಾಮ ಸಾಬ ಶಿರಹಟ್ಟಿ, ಅಶೋಕನಗರ, ಕುರಹಟ್ಟಿಪೇಟೆ, ಬೆಟಗೇರಿ. ಇವರು ತಾವು ಮೃತ ಇರ್ಸಾದ್ ಅಹ್ಮದ್ ಅಬ್ದುಲ್‌ಗನಿ ಶಿರಹಟ್ಟಿ ಇವರ ಹೆಂಡತಿ, ಮಕ್ಕಳು

ಮತ್ತು ತಂದೆ–ತಾಯಿ ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಇರ್ಸಾದ್ ಅಹ್ಮದ್ ಶಿರಹಟ್ಟಿ ಇವರು ಒಂದನೇ ಪ್ರತಿವಾದಿಗಳಾದ ಶ್ರೀ ಮೋಹನ ಹೂವಪ್ಪ ಗಜಕೋಶ, ರಾಜೀವ ಗಾಂಧಿ ನಗರ, ಗದಗ. ಇವರಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಕಾನೂನುಬದ್ಧ ಆಶ್ರಿತರೆಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯನ್ನು ಈ ನ್ಯಾಯಾಲಯದ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಆಕ್ಷೇಪಣೆಗಳನ್ನಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಕಾರ್ಮಿಕ ಅಧಿಕಾರಿ**
**ಗದಗ ಜಿಲ್ಲೆ, ಗದಗ ಹಾಗೂ**
**ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು.**

**ಪಿ.ಆರ್. 1247**

## IN THE COURT OF COMMISSIONER FOR WORKMEN`S COMPENSATION BIDAR.

**NO. LOB/WCA/Cr- 23/2012, Dated 24-08-2012**

**Applicants:-**

1. Baburao Kulkarni s/o Digamber Rao Kulkarni
   Age : 60 years, Occu : Agriculture
   All are r/o of village Torna Taluk Aurad
   Dist. Bidar and two others

**V/S**

**Respondents:-**

1. Md. Akmath s/o Abdul Aziz
   Age : 42 years, Occu : Business, House No. 21/190. N.G.O's colony, Zaheerabad Taluk,
   Dist. Medak, Andhra Pradesh.
2. The Divisional Manager of Oriental Ins. Co. Ltd.
   R/o N.V. Complex, Station Road opposite
   Mini Vidhana Soudha, Gulbarga

## PROCLAMATION

Sri Baburao Kulkarni S/o Digambar Rao Kulkarni R/o Village Torna Taluk, Aurad Dist. Bidar, have/has filed application in this court claiming compensation stating that Late Dharamrai Kulkarni was working as Driver under the Respondet No. - he met with an accident arising out of and during the course of employment as a result he died on 12-11-2011.

Wherefore, it is hereby notified for the information of these concerned that other dependents if any may file their claim application and objections within 30 days from the date of publication of this proclamation, if no applications on objections are received within the specified date the court will proceeded further in the matter.

**COMMISSIONER FOR WORKMEN`S**
**COMPENSATION, BIDAR**

**P.R. 1252**

## TRANSPORT SECRETARIAT

### CORRIGENDUM

**No. SARIE 112 SAESE 2011, Bangalore, dated : 17-07-2012.**

In the Official Memorandum No. SAREE 112 SAESE 2011, dated 02-06-2012, in para 3 the words " Within 30 days from the date of issue of the Official Memorandum", shall be read as "Within 30 days from the date of publication of this Official Memorandum in the Official Gazette."

By Order and in the name of the Governor of Karnataka,
**RAMACHANDRA,**
Under Secretary to Government,
Transport Department.

**P.R. 1242**

## URBAN DEVELOPMENT SECRETARIAT

### NOTIFICATION

**No.UDD/156 /MNJ/2012, Bangalore, dated: 10-07-2012.**

Whereas the Government of Karnataka has sanctioned an improvement scheme under section 18(3) of BDA Act 1976 for formation of layout called **further Extension of Anjanapura layout** vide Government order No. UDD/10/MNX/2002 dated: 07.02.2002 .

Now therefore in exercise of the powers conferred under sub-section (1) of section 19 of the Bangalore Development Authority Act 1976 (Karnataka Act No.12 of 1976) the Government of Karnataka hereby declares that the lands specified in the schedule noted below be the same a little more or less are additionally needed for public Purpose for providing **Water Supply & Sanitary facilities to Further Extension of Anjanapura layout** and in exercise of the powers conferred by clause (c) of section 3 and 7 of the Land Acquisition Act 1894 (Central Act 1 of 1894) as amended and extended from time to time by the Land Acquisition (Karnataka Extension and Amendment) Act 1961 (Karnataka Act 17 of 1961) read with section 36 of the Bangalore Development Authority Act 1976. The Special Additional Land Acquisition officer, Bangalore Development Authority Bangalore is hereby appointed to perform the functions of the Deputy Commissioner under the said Land Acquisition Act and directed to take order for the acquisition of the said Lands.

The Preliminary Notification for the acquisition of above lands was published in the Karnataka Gazette dated: 21.04.2011 in part 3 at pages 1275 & 1276 vide P.N.No. BDA/Commr/DC(LA)/SALAO/C4/PR/834/2010-11, dated: 20/11/2010.

A plan of the lands is kept in the office of the Special Additional Land Acquisition Officer of the Bangalore Development Authority, Bangalore for information.

By Order and in the name of the Governor of Karnataka

**S.CHANDRAPPA,**
Under Secretary to Government
Urban Development Department.

## SCHEDULE

**Village: Gollahalli** **Hobli: Uttarhalli** **Taluk: Bangalore South**

| **Sl. No** | **Name of the kathedars/Anubhavaders/ Smts. /Sriyuths.** | **Sy No.** | **Hissa** | **Whether/Dry/ wet/Garden** | **Total Extent** | **Kharab land** | **Remaining Eextent** | **Assess ment** | **Extent Proposed for acquisition** | **Bounded By** | | | |
|---|---|---|---|---|---|---|---|---|---|---|---|---|---|
| | | | | | A G | A G | A G | Rs./Ps | A G | East | West | North | **South** |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 |
| 1 | Govindappa<br>Gopalaiah<br>G Channakeshavaiah<br>G Ramamurthy<br>Sridharamurthy<br>Venkatamma (joint)<br>Mahesh N Tallam s/o T.S. Narayana<br>S Muralidhar s/o S.R. Sheshagirirao<br>K.G Ashwathnarayana Setty s/o K N Gopalaiah | 5 | | Dry | 4-00 | 0-25 | 3-15 | 7.38/ | 0-17 | 9 | 5(p) | 6 | 16/1 Road |
| 2 | Mahesh N Tallam s/o T.S Narayana S Muralidhar s/o S.R Sheshagiri Rao | 6 | | Dry | 0-14 | | 0-14 | 1.91/- | 0-14 | 9 | 3 | 7/2 | 5 |
| 3 | Mahesh N Tallam s/o T.S. Murthy | 7 | 2 | Dry | 0-08 | | 0-08 | 1.18/- | 0-08 | 9 | 3 | 7/1 | 6 |
| 4 | C Somashekar s/o Channaiah shetty | 25 | | Dry | 4-04 | 0-01 | 4-03 | 6.45/- | 0-02 | 25(p) | 25(p) | 24 | 27 |
| 5 | C Somashekar s/o Channaiah Shetty | 27 | | Dry | 2-14 | 0-01 | 2-13 | 3.68/- | 0-02 | 27(p) | 27(p) | 25 | 30/1A |
| | | | | | | | **Total** | | **1-03** | | | | |

By Order and in the name of the Governor of Karnataka

**S.CHANDRAPPA,**
Under Secretary to Government
Urban Development Department.

**P R 1272**

## URBAN DEVELOPMENT SECRETARIAT

### NOTIFICATION

**No.UDD/241/MNJ/2012, Bangalore, dated: 09 -07-2012.**

Whereas the Government of Karnataka has sanctioned an improvement scheme for the formation of layout called "**NADAPRABHU KEMPEGOWDA LAYOUT"** by the Bangalore Development Authority vide Government order no. UDD 51 MNX 2010 dated: 18.02.2010

Whereas it is expedient to complete the Land Acquisition process of the KEMPEGOWDA LAYOUT.

Now, therefore in exercise of the powers conferred under Sub-Section (1) of Section 19 of the Bangalore Development Authority Act 1976 (Karnataka Act No. 12 of 1976) and powers conferred by Clause-(c) of section 3 and Section 7 of Land Acquisition Act 1894 (Central Act 1 Amendment) Act 1961 (Karnataka Act 17 of 1976) read with Section 36 of the Bangalore Development Authority Act 1976, the following Land Acquisition officers are hereby appointed to perform the functions of the Deputy Commissioner (Land Acquisition), under the said Land Acquisition Act in respect of lands situated in villages noted against the Land Acquisition Officers to complete the Land Acquisition process in respect of KEMPEGOWDA LAYOUT.

| 1 | 2 | 3 |
|---|---|---|
| Sl No. | Land Acquisition Officers | Name of the Villages |
| 1 | Additional Land Acquisition officer | (1) Kodigehalli<br>(2) Kommaghatta<br>(3) Bheemanakuppe<br>(4) Chellaghatta |
| 2 | Special Additional Land Acquisition officer | (1) Kannahalli,<br>(2) Sulikere,<br>(3) Ramasandra,<br>(4) Kommaghatta<br>Krishnasagara |
| 3 | Special Land Acquisition officer | (1) Shigehalli<br>(2) Manganahalli<br>(3) Bheemanakuppe<br>Ramasagara<br>(4) Kenchanapura |

By Order and in the name of the Governor of Karnataka

**S.CHANDRAPPA,**
Under Secretary to Government
Urban Development Department.

**P R 1273**

## URBAN DEVELOPMENT SECRETARIAT

### CORRIGENDUM

### No.UDD/190/MNX/2012, Bangalore, dated: 09.07.2012

In Final Notification vide No. UDD 51 MNX 2010, dated 18-02-2010, in respect of Sheegehalli Village, Yeshwanthapura Hobli, Bangalore North Taluk, all the entries in the entire column at Sl.No. 50 shall be substituted as follows:-

| SL. No. | Name of the Khatedars/Anubhavadars.Smts./ Sriyuths. | Sy. No. | Hissa | Whether Dry/ Wet/ Garden | Total Extent | Kharab Land | Remaining Extent | Assessment | Extent proposed for Acquisition | Bounded By | | | |
|---|---|---|---|---|---|---|---|---|---|---|---|---|---|
| | | | | | A-G | A-G | A-G | Rs.Ps. | A.G. | East | West | North | South |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 |
| Village : Sheegehalli | | | | Hobli : Yeshvanthapura | | | | | | Taluk : Bangalore North | | | |
| | | | | | | | | | | | | | |
| **50A** | **Muniyappa s/o Doddaiah** | 36 | 1 | Dry | 0-32 | 0-0 | 0-32 | 0.32 | 0-12 | 34/2, 34/3, 36/1P | 39 | 35, 37 | 36/4 |
| **50B** | **H.C.Prakash s/o Chikkanna** | 36 | 2 | Dry | 1-02 | 0-02 | 1-00 | 1.00 | 1-02 | | | | |
| **50C** | **B.C.Chikkanna s/o late Chikkanna** | 36 | 3 | Dry | 1-02 | 0-02 | 1-00 | 1.26 | 1-02 | | | | |
| **50D** | **K.B.Krishanamurthy s/o late Balakrishna** | 36 | 4 | Dry | 1-02 | 0-02 | 1-00 | 1.26 | 0-22 | 36/4P | 39 | 36/3 | 36/5, 36/6, 36/7 |
| **50E** | **Manjunagappa s/o Venkataramanappa** | 36 | 5 | Dry | 0-15 | 0-01 | 0-14 | 0.44 | 0-15 | 34/6, Kannelli Gadi | 39 | 36/4 | Kannelli Gadi |
| **50F** | **G.Nirmala w/o S.Thimmaraju** | 36 | 6 | Dry | 0-13 | 0-00 | 0-13 | 0.41 | 0-13 | | | | |
| **50G** | **B.C.Chikkanna s/o late Chikkanna** | 36 | 7 | Dry | 0-13 | 0-00 | 0-13 | 0-41 | 0-13 | | | | |
| | | | | | **4-39** | | | | **3-39** | | | | |

By Order and in the name of the Governor of Karnataka

**S.CHANDRAPPA,**
Under Secretary to Government
Urban Development Department.

**P R 1274**

## ನಗರಾಭಿವೃದ್ಧಿ ಸಚಿವಾಲಯ

**ಅಧಿಸೂಚನೆ**

**ಸಂಖ್ಯೆ: ನಅಇ 103 ನಯೋಸೇ 2012, ಬೆಂಗಳೂರು, ದಿನಾಂಕ 02.08.2012.**

ವಿಷಯ: ದಿನಾಂಕ:01.01.2012 ರಲ್ಲಿದ್ದಂತೆ ನಗರ ಮತ್ತು ಗ್ರಾಮಾಂತರ ಯೋಜನಾ ಉಪ ನಿರ್ದೇಶಕರ ವೃಂದದ ಕರಡು ತಾತ್ಕಾಲಿಕ ಜ್ಯೇಷ್ಠತಾ ಪಟ್ಟಿ.

ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯ ಉಪ ನಿರ್ದೇಶಕರ ದಿನಾಂಕ: 01.01.2012ರಲ್ಲಿದ್ದಂತೆ ತಾತ್ಕಾಲಿಕ ಕರಡು ಜ್ಯೇಷ್ಠತಾ ಪಟ್ಟಿಯನ್ನು ಇದಕ್ಕೆ ಲಗತ್ತಿಸಿದೆ. ಈ ಕರಡು ಜ್ಯೇಷ್ಠತಾ ಪಟ್ಟಿಯಲ್ಲಿ ನಿಗಧಿಪಡಿಸಿರುವ ಹೆಸರು, ಪದನಾಮ, ಸ್ಥಾನ, ಸೇವಾ ವಿವರಗಳು ಇತ್ಯಾದಿಗಳ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಅಂತಹ ಆಕ್ಷೇಪಣೆಗಳನ್ನು ಅವಶ್ಯಕವಾದ ದಾಖಲೆಗಳೊಂದಿಗೆ ಹಾಗೂ ಅನುಸಮರ್ಥನೆಯೊಂದಿಗೆ ಈ ಪ್ರಕಟಣೆ ಹೊರಡಿಸಿದಾಗಿನಿಂದ 15(ಹದಿನೈದು) ದಿನಗಳೊಳಗಾಗಿ ಸಲ್ಲಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ರಮೇಶ್ ಬಾಬು,**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**ಅನುಬಂಧ–1**

**ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯ ದಿನಾಂಕ:01–01–2012 ರಲ್ಲಿದ್ದಂತೆ ನಗರ ಮತ್ತು ಗ್ರಾಮಾಂತರ ಯೋಜನಾ ಉಪ ನಿರ್ದೇಶಕರ ವೃಂದದ ಕರಡು ತಾತ್ಕಾಲಿಕ ಜೇಷ್ಠತಾ ಪಟ್ಟಿ.**

| ಕ್ರ. ಸಂ | ಹೆಸರು ಶ್ರೀ/ಶ್ರೀಮತಿ | ನೇರ ನೇಮಕಾತಿ ಮುಂಬಡ್ತಿ: ಇತರೆ | ಮೀಸಲಾತಿ ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ |
|---|---|---|---|---|---|---|---|
| 1 | ಎಸ್.ಎಲ್. ರಾಜಣ್ಣ | ಮುಂಬಡ್ತಿ | – | 10–06–66 | 20–03–98 | 01–08–09 | 27–05–08 |
| 2 | ಎಂ.ಸಿ. ಶಶಿಕುಮಾರ್ | ಮುಂಬಡ್ತಿ | – | 09–08–71 | 12–03–98 | 29–07–09 | 27–05–08 |
| 3 | ಜಿ. ವೇಣುಗೋಪಾಲ್ | ಮುಂಬಡ್ತಿ | – | 27–04–68 | 12–03–98 | 31–07–09 | 27–05–08 |
| 4 | ಟಿ.ವಿ. ಮುರಳಿ | ಮುಂಬಡ್ತಿ | – | 22–05–73 | 20–03–98 | 30–06–08 | 27–05–08 |
| 5 | ವಿವೇಕ್ ನಂದಕುಮಾರ್ ಕಾರೇಕರ್ | ಮುಂಬಡ್ತಿ | – | 29–11–71 | 09–03–98 | 20–06–08 | 27–05–08 |
| 6 | ಕೆ.ಎನ್. ನಾರಾಯಣಗೌಡ | ಮುಂಬಡ್ತಿ | – | 20–12–64 | 09–03–98 | 13–10–08 | 27–05–08 |
| 7 | ಬಿ.ಎನ್. ಗಿರೀಶ್ | ಮುಂಬಡ್ತಿ | – | 01–05–68 | 16–03–98 | 12–06–08 | 27–05–08 |
| 8 | ಬಿ. ರಾಧಾ | ಮುಂಬಡ್ತಿ | – | 09–09–67 | 12–03–98 | 12–07–10 | 13–01–10 |
| 9 | ಎನ್.ಹೆಚ್. ಸುಮ | ಮುಂಬಡ್ತಿ | – | 14–11–63 | 09–03–98 | 12–07–10 | 13–01–10 |
| 10 | ಎನ್. ಗೋಪಾಲಕೃಷ್ಣ | ಮುಂಬಡ್ತಿ | – | 03–02–66 | 10–03–98 | 08–02–10 | 13–01–10 |
| 11 | ಮಹಮ್ಮದ್ ಫಾಜಿಲ್ | ಮುಂಬಡ್ತಿ | – | 05–06–67 | 12–03–98 | 29–07–11 | 13–01–10 |
| 12 | ವಿದ್ಯಾರಾಣಿ | ಮುಂಬಡ್ತಿ | – | 20–02–73 | 12–03–98 | 12–07–10 | 13–01–10 |
| 13 | ಎ. ಗೀತಾ | ಮುಂಬಡ್ತಿ | – | 04–10–74 | 01–10–04 | 18–01–10 | 13–01–10 |
| 14 | ಶೈಲೇಂದ್ರಸಿಂಗ್ | ಮುಂಬಡ್ತಿ | – | 04–10–74 | 01–10–04 | 15–09–10 | 13–01–10 |
| 15 | ಮೋನಿಕಾ ಕಷ್ಠರಿ | ಮುಂಬಡ್ತಿ | – | 04–09–76 | 04–10–04 | 16–01–10 | 13–01–10 |
| 16 | ಆರ್. ಸುಮತಿ | ಮುಂಬಡ್ತಿ | – | 18–06–79 | 27–09–04 | 18–01–10 | 13–01–10 |
| 17 | ಹೆಚ್.ವಿ. ಸಣ್ಣಪ್ಪಯ್ಯ | ಮುಂಬಡ್ತಿ | – | 23–05–65 | 22–11–08 | 06–07–11 | 30–06–11 |
| 18 | ಎಂ.ಎಸ್. ಶಾಂತಲಾ | ಮುಂಬಡ್ತಿ | – | 12–03–74 | 01–10–04 | 18–01–10 | 13–01–10 |
| 19 | ಎನ್. ವೀಣಾ | ಮುಂಬಡ್ತಿ | – | 10–07–75 | 27–09–04 | 12–05–10 | 13–01–10 |
| 20 | ಚೌಡೇಗೌಡ** | ಮುಂಬಡ್ತಿ | – | 01–06–56 | 20–12–82 | 23–07–10 | 15–06–10 |

| ಕ್ರ. ಸಂ | ಹೆಸರು ಶ್ರೀ/ಶ್ರೀಮತಿ | ನೇರ ನೇಮಕಾತಿ ಮುಂಬಡ್ತಿ: ಇತರೆ | ಮೀಸಲಾತಿ ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ಜೇಷ್ಠತೆಗೆ ನೈಜವಾದ ಅರ್ಹತಾ ದಿನಾಂಕ |
|---|---|---|---|---|---|---|---|
| 21 | ಹೆಚ್.ಎನ್. ರಘು | ಮುಂಬಡ್ತಿ | ಪ.ಜಾ. | 20–07–74 | 04–10–04 | 24–03–11 | 30–06–11 |
| 22 | ಕೆ.ವಿ. ಜಯರಾಜ್ | ಮುಂಬಡ್ತಿ | ಪ.ಪಂ. | 13–06–69 | 29–09–04 | 02–09–11 | 30–06–11 |
| 23 | ಎ. ರಮೇಶ್ | ಮುಂಬಡ್ತಿ | – | 01–01–58 | 04–10–04 | 28–07–11 | 30–06–11 |
| 24 | ಎಂ. ಮಹದೇವಪ್ರಸಾದ್ | ಮುಂಬಡ್ತಿ | ಪ.ಜಾ. | 03–12–67 | 01–10–04 | 04–07–11 | 30–06–11 |
| 25 | ವೆಂಕಟ ದುರ್ಗಪ್ರಸಾದ್ ಕುಂಚಲ | ಮುಂಬಡ್ತಿ | ಪ.ಜಾ. | 22–07–67 | 25–09–04 | 04–07–11 | 30–06–11 |
| 26 | ಎನ್.ಎಂ. ನಂಜೇಗೌಡ | ಮುಂಬಡ್ತಿ | – | 22–07–67 | 21–07–98 | 04–07–11 | 30–06–11 |
| 27 | ಬಿ.ವಿ. ಚಿತ್ತವಾಡಗಿ | ಮುಂಬಡ್ತಿ | – | 30–04–56 | 22–09–76 | 22–11–11 | 30–06–11 |
| 28 | ಸಿ.ವಿ. ವಸ್ತ್ರದ್ | ಮುಂಬಡ್ತಿ | – | 01–08–55 | 21–08–76 | 19–07–11 | 30–06–11 |

**ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯ ತೀರ್ಪಿನಂತೆ ಸರ್ಕಾರದ ಅಧಿಸೂಚನೆ ಸಂಖ್ಯೆ: ನಅಇ 160 ನಯೋಸೇ 2008, ದಿನಾಂಕ: 15–06–2010ರಲ್ಲಿ ಸೇವೆಗೆ ಪುನಃ ಸ್ಥಿತಿಗೊಳಿಸಿದೆ.

**ಬಿ.ರಮೇಶ್ ಬಾಬು**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

**ಪಿ.ಆರ್. 1081**

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ಅಧಿಸೂಚನೆ

**ಸಂಖ್ಯೆ: ಆಕುಕ 62 ಹೆಚ್‌ಎಸ್‌ಜಿ 2011, ಬೆಂಗಳೂರು, ದಿನಾಂಕ: 03–07–2012.**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿನ ಜಂಟಿ ನಿರ್ದೇಶಕರ ಅಂತಿಮ ಜೇಷ್ಠತಾ ಪಟ್ಟಿಯನ್ನು ದಿನಾಂಕ 01–01–2009 ರಲ್ಲಿದ್ದಂತೆ ಸರ್ಕಾರದ ಅಧಿಸೂಚನೆ ಸಂಖ್ಯೆ : ಆಕುಕ 40 ಎಂಎಸ್‌ಎಸ್ 2009 ದಿನಾಂಕ 22–11–2010 ರಲ್ಲಿ ಪ್ರಕಟಿಸಲಾಗಿತ್ತು. ಮುಂದುವರಿದು, ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ : 7478/2011 ರಲ್ಲಿ ಡಾ॥ ಹೀರಾ ಬಿ. ರಾಯ್ಕರ್ ಸಲ್ಲಿಸಿದ್ದ ರಿಟ್ ಅರ್ಜಿಯ ಹಿನ್ನೆಲೆಯಲ್ಲಿ, ಸರ್ಕಾರದ ಆದೇಶ ಸಂಖ್ಯೆ : ಆಕುಕ 62 ಹೆಚ್‌ಎಸ್‌ಜಿ 2011, ದಿನಾಂಕ 28–05–2012 ರಲ್ಲಿ ಜಂಟಿ ನಿರ್ದೇಶಕರ ವೃಂದದಲ್ಲಿ ದಿನಾಂಕ 27–05–2008 ಮತ್ತು 03–11–2008 ರಂದು ನೀಡಿದ ಮನವಿಗಳನ್ನು ಪರಾಮರ್ಶಿಸಿ, ಜಂಟಿ ನಿರ್ದೇಶಕರ ವೃಂದಕ್ಕೆ ನೀಡಿದ್ದ ಮುಂಬಡ್ತಿ ದಿನಾಂಕಗಳನ್ನು ಪರಿಷ್ಕರಿಸಿ ಆದೇಶ ಹೊರಡಿಸಲಾಗಿದೆ.

ಮಾನ್ಯ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಮೇಲೆ ತಿಳಿಸಿದ ರಿಟ್ ಅರ್ಜಿಯಲ್ಲಿ ದಿನಾಂಕ 11–04–2011 ರಂದು ನೀಡಿರುವ ತೀರ್ಪಿನಲ್ಲಿ ಅಪರ ನಿರ್ದೇಶಕರ ವೃಂದದಲ್ಲಿಯೂ ಸಹ ಅರ್ಜಿದಾರರಾದ ಡಾ॥ ಹೀರಾ ಬಿ. ರಾಯ್ಕರ್ ಇವರ ಮುಂಬಡ್ತಿಯನ್ನು ಪರಾಮರ್ಶಿಸಿ, ಜೇಷ್ಠತೆಯನ್ನು ನಿಗದಿಪಡಿಸಲು ನಿರ್ದೇಶನ ನೀಡಿದೆ.

ಮಾನ್ಯ ಆಡಳಿತ ನ್ಯಾಯ ಮಂಡಳಿಯು ಮೇಲ್ಕಂಡ ತೀರ್ಪಿನನ್ವಯ, ಸರ್ಕಾರವು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಅಪರ ನಿರ್ದೇಶಕರ ವೃಂದದಲ್ಲಿ ದಿನಾಂಕ 01–08–2010 ರಲ್ಲಿದ್ದಂತೆ ನೀಡಲಾಗಿರುವ ಮುಂಬಡ್ತಿಗಳನ್ನು ಪರಾಮರ್ಶಿಸಿದೆ. ಅದರಂತೆ ಅಪರ ನಿರ್ದೇಶಕರ ವೃಂದದಲ್ಲಿ ತಯಾರಿಸಿದ ಜೇಷ್ಠತಾ ಪಟ್ಟಿಯನ್ನು ಈ ಅಧಿಸೂಚನೆಗೆ ಲಗತ್ತಿಸಿರುವ ಅನುಬಂಧದಲ್ಲಿ ಪ್ರಕಟಿಸಲಾಗಿದೆ. ಸದರಿ ಜೇಷ್ಠತಾ ಪಟ್ಟಿಯ ಕುರಿತಂತೆ ಆಕ್ಷೇಪಣೆ/ಸಲಹೆಗಳು ಯಾವುದಾದರೂ ಇದ್ದಲ್ಲಿ ಈ ಅಧಿಸೂಚನೆ ಹೊರಡಿಸಿದ ದಿನಾಂಕದಿಂದ 15 ದಿನಗಳೊಳಗಾಗಿ ಸರ್ಕಾರದ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರಿಗೆ ಸಲ್ಲಿಸಲು ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಚಿಕ್ಕೇಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
(ಸೇವೆಗಳು).

**ಸರ್ಕಾರದ ಅಧಿಸೂಚನೆ ಸಂಖ್ಯೆ : ಆಕುಕ 62 ಹೆಚ್‌ಎಸ್‌ಜಿ 2011, ದಿನಾಂಕ 03–07–2012 ಕ್ಕೆ ಅನುಬಂಧ**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಅಪರ ನಿರ್ದೇಶಕರ ವೃಂದದಲ್ಲಿ ದಿನಾಂಕ 01–08–2010 ರಲ್ಲಿದ್ದಂತೆ ನೀಡಲಾಗಿರುವ ಮುಂಬಡ್ತಿಗಳನ್ನು ಪರಾಮರ್ಶಿಸಿ, ಕೆಳಕಂಡಂತೆ ಮುಂಬಡ್ತಿ ದಿನಾಂಕಗಳನ್ನು ಪರಿಷ್ಕರಿಸಿದೆ.

| ಕ್ರ. ಸಂ. | ಹೆಸರು | ಜನ್ಮ ದಿನಾಂಕ | ಅಪರ ನಿರ್ದೇಶಕರ ವೃಂದದಲ್ಲಿ ವಾಸ್ತವವಾಗಿ ಮುಂಬಡ್ತಿ ಪಡೆದ ದಿನಾಂಕ | ಪರಾಮರ್ಶಿಸಿದ ನಂತರ ಅಪರ ನಿರ್ದೇಶಕರ ವೃಂದದಲ್ಲಿ ಅಂತಿಮವಾಗಿ ನಿಗದಿಪಡಿಸಿದ ಅರ್ಹತಾ ದಿನಾಂಕ | ಷರಾ |
|---|---|---|---|---|---|
| 1 | 2 | 3 | 4 | 5 | 6 |
| ದಿನಾಂಕ 01–08–2010 ರಲ್ಲಿದ್ದಂತೆ ಎಲ್ಲಾ ಅಪರ ನಿರ್ದೇಶಕರ ಹುದ್ದೆಗಳು ಭರ್ತಿಯಾಗಿತ್ತು | | | | | |
| 1 | ಡಾ॥ ಕೆ.ಎಂ. ಪ್ರೇಮ | 26–12–1950 | – | 26–08–2010 | ಡಾ॥ ಸುಮೇಧಾ ದೇಸಾಯಿ ಇವರ ಮುಂಬಡ್ತಿಯಿಂದ ದಿನಾಂಕ 25–08–2010 ರಂದು ತೆರವಾದ ಹುದ್ದೆ |
| 2 | ಡಾ॥ ಸಿ.ಆರ್. ಅನ್ನಪೂರ್ಣ | 24–08–1951 | – | – | ಇವರು ದಿನಾಂಕ 24–12–2008 ರಂದು ಸ್ವ–ಇಚ್ಛಾ ನಿವೃತ್ತಿ ಪಡೆದಿರುತ್ತಾರೆ |
| 3 | ಡಾ॥ ವಿ. ದಿನಮಣಿ | 19–08–1950 | – | 26–08–2010 | ಡಾ॥ ಉಷಾ ವಾಸನ್ಕರ್ ರವರ ಮುಂಬಡ್ತಿಯಿಂದ ದಿನಾಂಕ 25–08–2010 ರಂದು ತೆರವಾದ ಹುದ್ದೆ |
| 4 | ಡಾ॥ ವಿನುತ | 20–06–1950 | – | – | ದಿನಾಂಕ 30–06–2008 ರಂದು ವಯೋನಿವೃತ್ತಿ ಹೊಂದಿರುತ್ತಾರೆ. |
| 5 | ಡಾ॥ ಹೀರಾ ಬಿ. ರಾಯ್ಕರ್ | 01–06–1952 | 31–05–2011 | 10–09–2010 | ಡಾ॥ ಚಂದ್ರಶೇಖರ ನಾಯಕ್ ರವರ ದಿನಾಂಕ 09–09–2010 ರ ಮುಂಬಡ್ತಿಯಿಂದ ತೆರವಾದ ಹುದ್ದೆ |
| 6 | ಡಾ॥ ಅರುಣಾ ರುದ್ರಪ್ಪ | 24–04–1952 | – | – | ಮುಚ್ಚಿದ ಲಕೋಟೆಯಲ್ಲಿದ್ದ ಅವಧಿಯಲ್ಲಿಯೇ ವಯೋನಿವೃತ್ತಿ ಹೊಂದಿರುತ್ತಾರೆ. |
| 7 | ಡಾ॥ ಟಿ.ಎಸ್. ಚಲುವರಾಜು | 06–08–1952 | 31–05–2011 | 01–01–2011 | ಡಾ॥ ಮೋಹನ್‌ರಾಜು ರವರ ದಿನಾಂಕ 31–12–2010 ರ ವಯೋನಿವೃತ್ತಿಯಿಂದ ತೆರವಾದ ಹುದ್ದೆ |

**ಚಿಕ್ಕೇಗೌಡ,**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

ಪಿ.ಆರ್. 1244

## ಅಬಕಾರಿ ಉಪ ಆಯುಕ್ತರ ಕಛೇರಿ, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ.

### ಅಧಿಸೂಚನೆ

**ಸಂಖ್ಯೆ:ಇಎಕ್ಸ್‌ಇ/ಚಿಪುರ ಸಿಬ್ಬಂದಿ/27/2012–13, ದಿನಾಂಕ:12/07/2012.**

ಕೇಂದ್ರ ಮಾಹಿತಿ ಹಕ್ಕು ಅಧಿನಿಯಮ 2005 ನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವ ಸಂಬಂಧ ಮಾಹಿತಿ ಹಕ್ಕು ಅಧಿನಿಯಮ (Central Act 22 of 2005) ಸೆಕ್ಷೆನ್ 5(1), 5(2), 19(1) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮಾಹಿತಿಯನ್ನು ಕೋರುವ ವ್ಯಕ್ತಿಗಳಿಗೆ ಮೇಲಿನ ಕಾಯ್ದೆಯನ್ವಯ ಅಬಕಾರಿ ಇಲಾಖೆ ಚಿಕ್ಕಬಳ್ಳಾಪುರ ಜಿಲ್ಲೆಗೆ ಸಂಬಂಧಿಸಿದಂತೆ ಮಾಹಿತಿಯನ್ನು ಒದಗಿಸಲು 'ಸಾರ್ವಜನಿಕ ಮಾಹಿತಿ ಅಧಿಕಾರಿ', 'ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ' ಮತ್ತು 'ಮೇಲ್ಮನವಿ ಪ್ರಾಧಿಕಾರಗಳನ್ನು' ನೇಮಕ ಮಾಡಿ ಆದೇಶ ಹೊರಡಿಸಲಾಗಿದೆ.

| ಕ್ರ. ಸಂ. | ತಮ್ಮ ಇಲಾಖಾ ವ್ಯಾಪ್ತಿಯಲ್ಲಿ ಬರುವ ಸಾರ್ವಜನಿಕ ಪ್ರಾಧಿಕಾರಗಳ ಹೆಸರು | ಸಾರ್ವಜನಿಕ ಮಾಹಿತಿ ಅಧಿಕಾರಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರ |
|---|---|---|---|---|
| 1 | ಅಬಕಾರಿ ಉಪ ಆಯುಕ್ತರ ಕಛೇರಿ, ಚಿಕ್ಕಬಳ್ಳಾಪುರ ಜಿಲ್ಲೆ. | ಅಬಕಾರಿ ಉಪ ಅಧೀಕ್ಷಕರು (ಕೇಂದ್ರಸ್ಥಾನ), ಅಬಕಾರಿ ಉಪ ಆಯುಕ್ತರ ಕಛೇರಿ, ಚಿಕ್ಕಬಳ್ಳಾಪುರ ಜಿಲ್ಲೆ | ಅಬಕಾರಿ ಉಪ ಅಧೀಕ್ಷಕರು (ಕೇಂದ್ರಸ್ಥಾನ) ಅಬಕಾರಿ ಉಪ ಆಯುಕ್ತರ ಕಛೇರಿ, ಚಿಕ್ಕಬಳ್ಳಾಪುರ ಜಿಲ್ಲೆ **08156–274413** **08156–274412** | ಅಬಕಾರಿ ಉಪ ಆಯುಕ್ತರು, ಅಬಕಾರಿ ಉಪ ಆಯುಕ್ತರ ಕಛೇರಿ, ಚಿಕ್ಕಬಳ್ಳಾಪುರ ಜಿಲ್ಲೆ. |

| ಕ್ರ ಸಂ. | ತಮ್ಮ ಇಲಾಖಾ ವ್ಯಾಪ್ತಿಯಲ್ಲಿ ಬರುವ ಸಾರ್ವಜನಿಕ ಪ್ರಾಧಿಕಾರಗಳ ಹೆಸರು | ಸಾರ್ವಜನಿಕ ಮಾಹಿತಿ ಅಧಿಕಾರಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರ |
|---|---|---|---|---|
| 2 | ಅಬಕಾರಿ ಉಪ ಅಧೀಕ್ಷಕರ ಕಛೇರಿ, ಚಿಕ್ಕಬಳ್ಳಾಪುರ ಉಪ ವಿಭಾಗ, ಚಿಕ್ಕಬಳ್ಳಾಪುರ ಜಿಲ್ಲೆ. | ಅಬಕಾರಿ ನಿರೀಕ್ಷಕರು, ಚಿಕ್ಕಬಳ್ಳಾಪುರ ಉಪ ವಿಭಾಗ, ಚಿಕ್ಕಬಳ್ಳಾಪುರ ಜಿಲ್ಲೆ. | ಅಬಕಾರಿ ನಿರೀಕ್ಷಕರು, ಚಿಕ್ಕಬಳ್ಳಾಪುರ ಉಪ ವಿಭಾಗ, ಚಿಕ್ಕಬಳ್ಳಾಪುರ ಜಿಲ್ಲೆ. 08156–272892 | ಅಬಕಾರಿ ಉಪ ಅಧೀಕ್ಷಕರು, ಚಿಕ್ಕಬಳ್ಳಾಪುರ ಉಪ ವಿಭಾಗ, ಚಿಕ್ಕಬಳ್ಳಾಪುರ ಜಿಲ್ಲೆ |
| 3 | ಅಬಕಾರಿ ಉಪ ಅಧೀಕ್ಷಕರ ಕಛೇರಿ, ಚಿಂತಾಮಣಿ ಉಪ ವಿಭಾಗ, ಚಿಕ್ಕಬಳ್ಳಾಪುರ ಜಿಲ್ಲೆ. | ಅಬಕಾರಿ ನಿರೀಕ್ಷಕರು, ಚಿಂತಾಮಣಿ ಉಪ ವಿಭಾಗ, ಚಿಕ್ಕಬಳ್ಳಾಪುರ ಜಿಲ್ಲೆ. | ಅಬಕಾರಿ ಉಪ ನಿರೀಕ್ಷಕರು, ಚಿಂತಾಮಣಿ ಉಪ ವಿಭಾಗ, ಚಿಕ್ಕಬಳ್ಳಾಪುರ ಜಿಲ್ಲೆ. 08154–252846 | ಅಬಕಾರಿ ಉಪ ಅಧೀಕ್ಷಕರು, ಚಿಂತಾಮಣಿ ಉಪ ವಿಭಾಗ, ಚಿಕ್ಕಬಳ್ಳಾಪುರ ಜಿಲ್ಲೆ. |
| 4 | ಅಬಕಾರಿ ನಿರೀಕ್ಷಕರ ಕಛೇರಿ, ಚಿಕ್ಕಬಳ್ಳಾಪುರ ವಲಯ, | ಅಬಕಾರಿ ನಿರೀಕ್ಷಕರು, ಚಿಕ್ಕಬಳ್ಳಾಪುರ ವಲಯ, | ಅಬಕಾರಿ ಉಪ ನಿರೀಕ್ಷಕರು, ಚಿಕ್ಕಬಳ್ಳಾಪುರ ವಲಯ, 08156–270856 | ಅಬಕಾರಿ ಉಪ ಅಧೀಕ್ಷಕರು, ಚಿಕ್ಕಬಳ್ಳಾಪುರ ಉಪ ವಿಭಾಗ, ಚಿಕ್ಕಬಳ್ಳಾಪುರ ಜಿಲ್ಲೆ |
| 5 | ಅಬಕಾರಿ ನಿರೀಕ್ಷಕರ ಕಛೇರಿ, ಗೌರಿಬಿದನೂರು ವಲಯ, | ಅಬಕಾರಿ ನಿರೀಕ್ಷಕರು, ಗೌರಿಬಿದನೂರು ವಲಯ, | ಅಬಕಾರಿ ಉಪ ನಿರೀಕ್ಷಕರು, ಗೌರಿಬಿದನೂರು ವಲಯ, 08155–285882 | ಅಬಕಾರಿ ಉಪ ಅಧೀಕ್ಷಕರು, ಚಿಕ್ಕಬಳ್ಳಾಪುರ ಉಪ ವಿಭಾಗ, ಚಿಕ್ಕಬಳ್ಳಾಪುರ ಜಿಲ್ಲೆ. |
| 6 | ಅಬಕಾರಿ ನಿರೀಕ್ಷಕರ ಕಛೇರಿ, ಶಿಡ್ಲಘಟ್ಟ ವಲಯ, | ಅಬಕಾರಿ ನಿರೀಕ್ಷಕರು, ಶಿಡ್ಲಘಟ್ಟ ವಲಯ, | ಅಬಕಾರಿ ಉಪ ನಿರೀಕ್ಷಕರು, ಶಿಡ್ಲಘಟ್ಟ ವಲಯ, 08158–254031 | ಅಬಕಾರಿ ಉಪ ಅಧೀಕ್ಷಕರು, ಚಿಂತಾಮಣಿ ಉಪ ವಿಭಾಗ, ಚಿಕ್ಕಬಳ್ಳಾಪುರ ಜಿಲ್ಲೆ. |
| 7 | ಅಬಕಾರಿ ನಿರೀಕ್ಷಕರ ಕಛೇರಿ, ಚಿಂತಾಮಣಿ ವಲಯ | ಅಬಕಾರಿ ನಿರೀಕ್ಷಕರು, ಚಿಂತಾಮಣಿ ವಲಯ | ಅಬಕಾರಿ ಉಪ ನಿರೀಕ್ಷಕರು, ಚಿಂತಾಮಣಿ ವಲಯ 08154–254963 | ಅಬಕಾರಿ ಉಪ ಅಧೀಕ್ಷಕರು, ಚಿಂತಾಮಣಿ ಉಪ ವಿಭಾಗ, ಚಿಕ್ಕಬಳ್ಳಾಪುರ ಜಿಲ್ಲೆ. |
| 8 | ಅಬಕಾರಿ ನಿರೀಕ್ಷಕರ ಕಛೇರಿ, ಬಾಗೇಪಲ್ಲಿ ವಲಯ | ಅಬಕಾರಿ ನಿರೀಕ್ಷಕರು, ಬಾಗೇಪಲ್ಲಿ ವಲಯ | ಅಬಕಾರಿ ಉಪ ನಿರೀಕ್ಷಕರು, ಬಾಗೇಪಲ್ಲಿ ವಲಯ 08150–283346 | ಅಬಕಾರಿ ಉಪ ಅಧೀಕ್ಷಕರು, ಚಿಂತಾಮಣಿ ಉಪ ವಿಭಾಗ, ಚಿಕ್ಕಬಳ್ಳಾಪುರ ಜಿಲ್ಲೆ. |
| 9 | ಅಬಕಾರಿ ಉಪ ಅಧೀಕ್ಷಕರ ಕಛೇರಿ, ಮೆ॥ ಮಾಲ್ಟ್ ಸ್ಪಿರಿಟ್ಸ್ ಇಂಡಿಯಾ ಪ್ರೈ.ಲಿ., ಚಿಕ್ಕಬಳ್ಳಾಪುರ. | ಅಬಕಾರಿ ಉಪ ಅಧೀಕ್ಷಕರು ಮೆ॥ ಮಾಲ್ಟ್ ಸ್ಪಿರಿಟ್ಸ್ ಇಂಡಿಯಾ ಪ್ರೈ.ಲಿ., ಚಿಕ್ಕಬಳ್ಳಾಪುರ | ಅಬಕಾರಿ ಉಪ ನಿರೀಕ್ಷಕರು, ಮೆ॥ ಮಾಲ್ಟ್ ಸ್ಪಿರಿಟ್ಸ್ ಇಂಡಿಯಾ ಪ್ರೈ.ಲಿ., ಚಿಕ್ಕಬಳ್ಳಾಪುರ. 08156–263006 | ಅಬಕಾರಿ ಉಪ ಆಯುಕ್ತರು, ಅಬಕಾರಿ ಉಪ ಆಯುಕ್ತರ ಕಛೇರಿ, ಚಿಕ್ಕಬಳ್ಳಾಪುರ ಜಿಲ್ಲೆ |
| 10 | ಅಬಕಾರಿ ಅಧೀಕ್ಷಕರ ಕಛೇರಿ, ಮೆ॥ ಗೌರಿ ಇಂಡಸ್ಟ್ರೀಸ್, ಗೌರಿಬಿದನೂರು. | ಅಬಕಾರಿ ಅಧೀಕ್ಷಕರು ಮೆ॥ ಗೌರಿ ಇಂಡಸ್ಟ್ರೀಸ್, ಗೌರಿಬಿದನೂರು | ಅಬಕಾರಿ ನಿರೀಕ್ಷಕರು ಮೆ॥ ಗೌರಿ ಇಂಡಸ್ಟ್ರೀಸ್, ಗೌರಿಬಿದನೂರು 08155–285484 | ಅಬಕಾರಿ ಉಪ ಆಯುಕ್ತರು, ಅಬಕಾರಿ ಉಪ ಆಯುಕ್ತರ ಕಛೇರಿ, ಚಿಕ್ಕಬಳ್ಳಾಪುರ ಜಿಲ್ಲೆ. |
| 12 | ಅಬಕಾರಿ ನಿರೀಕ್ಷಕರ ಕಛೇರಿ, ಕೆ.ಎಸ್.ಬಿ.ಸಿ.ಎಲ್. ಡಿಪೋ, ಶಿಡ್ಲಘಟ್ಟ. | ಅಬಕಾರಿ ನಿರೀಕ್ಷಕರು, ಕೆ.ಎಸ್.ಬಿ.ಸಿ.ಎಲ್. ಡಿಪೋ, ಶಿಡ್ಲಘಟ್ಟ | ಅಬಕಾರಿ ನಿರೀಕ್ಷಕರು, ಕೆ.ಎಸ್.ಬಿ.ಸಿ.ಎಲ್. ಡಿಪೋ, ಶಿಡ್ಲಘಟ್ಟ 08158–255576 | ಅಬಕಾರಿ ಉಪ ಅಧೀಕ್ಷಕರು, ಚಿಂತಾಮಣಿ ಉಪ ವಿಭಾಗ, ಚಿಕ್ಕಬಳ್ಳಾಪುರ ಜಿಲ್ಲೆ. |
| 13 | ಅಬಕಾರಿ ನಿರೀಕ್ಷಕರ ಕಛೇರಿ, ಕೆ.ಎಸ್.ಬಿ.ಸಿ.ಎಲ್. ಡಿಪೋ, ಚಿಂತಾಮಣಿ | ಅಬಕಾರಿ ನಿರೀಕ್ಷಕರು, ಕೆ.ಎಸ್.ಬಿ.ಸಿ.ಎಲ್. ಡಿಪೋ, ಚಿಂತಾಮಣಿ | ಅಬಕಾರಿ ನಿರೀಕ್ಷಕರು, ಕೆ.ಎಸ್.ಬಿ.ಸಿ.ಎಲ್. ಡಿಪೋ, ಚಿಂತಾಮಣಿ 08154–252889 | ಅಬಕಾರಿ ಉಪ ಅಧೀಕ್ಷಕರು, ಚಿಂತಾಮಣಿ ಉಪ ವಿಭಾಗ, ಚಿಕ್ಕಬಳ್ಳಾಪುರ ಜಿಲ್ಲೆ. |

**ಅಬಕಾರಿ ಉಪ ಆಯುಕ್ತರು,**
**ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ.**

**ಪಿ.ಆರ್. 1073**